## ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಹೊಸಕೋಟೆ ತಾಲ್ಲೂಕು. ಬೆಂಗಳೂರು ಗ್ರಾಮಾಂತರ ಜಿಲ್ಲೆ

**ಪ್ರಶ್ನೋತ್ತರ ಪತ್ರಿಕೆ ಸಂಗ್ರಹ – 01**

**ಪ್ರಥಮ ಭಾಷೆ– ಕನ್ನಡ** ಸಮಯ : 3 ಗಂಟೆ 15 ನಿಮಿಷ

**10ನೇ ತರಗತಿ** ಒಟ್ಟು ಅಂಕಗಳು : 100

**I. ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ. 9 X 1 = 9**

**1) ರಾಹಿಲನು ತುರ್ತುಪರಿಸ್ಥಿತಿ ನಿರ್ವಹಣೆಗೆ ಭದ್ರವಾಗಿ ಹಿಡಿದುಕೊಂಡಿದ್ದೇನು. ?**

**ಉತ್ತರ :** ರಾಹಿಲನು ತುರ್ತುಪರಿಸ್ಥಿತಿ ನಿರ್ವಹಣೆಗೆ ಔಷಧ ಮತ್ತು ಶಸ್ತ್ರಚಿಕಿತ್ಸಾ ಸಾಮಾನುಗಳ ಪೆಟ್ಟಿಗೆಯನ್ನು ಭದ್ರವಾಗಿ ಹಿಡಿದುಕೊಂಡಿದ್ದನು.

**2) ಮತಂಗಾಶ್ರಮಕ್ಕೆ ಹೊಗಲು ರಾಮಲಕ್ಷ್ಮಣರಿಗೆ ಸೂಚಿಸಿದವರು ಯಾರು. ?**

**ಉತ್ತರ :** ಮತಂಗಾಶ್ರಮಕ್ಕೆ ಹೊಗಲು ರಾಮಲಕ್ಷ್ಮಣರಿಗೆ ಸೂಚಿಸಿದವರು ಧನುಮಹರ್ಷಿ.

**3) ವಚನಕಾರರಿಗೆ ಯಾವುದು ದೇವರಾಗಿತ್ತು. ?**

**ಉತ್ತರ :** ವಚನಕಾರರಿಗೆ ಅವರವರ ಪ್ರಜ್ಞೆಯೇ ದೇವರಾಗಿತ್ತು.

**4) ಧರ್ಮಬುದ್ದಿಯು ಸೂರ್ಯೋದಯವಾದ ಕೂಡಲೆ ಏನು ಮಾಡಿದನು. ?**

**ಉತ್ತರ :** ಧರ್ಮಬುದ್ದಿಯು ಸೂರ್ಯೋದಯವಾದ ಕೂಡಲೆ ದೇವಗುರು ದ್ವಿಜರ ಪೂಜೆ ಮಾಡಿದನು.

**5) ಯಶೋಭದ್ರೆಯು ರತ್ನಗಂಬಳಿಗಳನ್ನು ಯಾರಿಗೆ ಕೊಟ್ಟಳು. ?**

**ಉತ್ತರ:** ಯಶೋಭದ್ರೆಯು ರತ್ನಗಂಬಳಿಗಳನ್ನು ತನ್ನ 32 ಜನ ಸೊಸೆಯಂದಿರಿಗೆ ಕೊಟ್ಟಳು.

**6) ಹಕ್ಕಿಯ ಗರಿಯಲ್ಲಿ ಯಾವ ಯಾವ ಬಣ್ಣಗಳಿವೆ. ?**

**ಉತ್ತರ :** ಹಕ್ಕಿಯ ಗರಿಯಲ್ಲಿ ಬಿಳಿ ಮತ್ತು ಹೊಳೆಯುವ ಬಣ್ಣಗಳಿವೆ.

**7) ಕುಂಪಣಿ ಸರ್ಕಾರ ಯಾವ ಆದೇಶ ಹೊರಡಿಸಿತು. ?**

**ಉತ್ತರ :** ಕುಂಪಣಿ ಸರ್ಕಾರ ನಿಶ್ಯಸ್ತ್ರೀಕರಣ ಆದೇಶ ಹೊರಡಿಸಿತು.

**8) ಲವನು ಕುದುರೆಯನ್ನು ಯಾವುದರಿಂದ ಕುದುರೆಯನ್ನು ಕಟ್ಟಿದನು. ?**

**ಉತ್ತರ :** ಲವನು ತನ್ನ ಉತ್ತರೀಯದಿಂದ ಕುದುರೆಯನ್ನು ಕಟ್ಟಿದನು.

**9) ಹಾಲುಗಲ್ಲ ಪುಟ್ಟ ಪೋರಿ ಏನುಮಾಡುತ್ತಿದ್ದಾಳೆ. ?**

**ಉತ್ತರ :** ಹಾಲುಗಲ್ಲ ಪುಟ್ಟ ಪೋರಿ ಮುಸುರೆ ತಿಕ್ಕುತ್ತಿದ್ದಾಳೆ.

**II ಕೆಳಗಿನ ಪ್ರಶ್ನೆಗಳಿಗೆ ಮೂರು– ನಾಲ್ಕು ವಾಕ್ಯದಲ್ಲಿ ಉತ್ತರ ಬರೆಯಿರಿ. 10X2=20**

**10) ಮಹಿಳೆಯ ಆರ್ತನಾದ ಕೇಳಿ ರಾಹಿಲನ ಮನದಲ್ಲಿ ಮೂಡಿದ ಪ್ರಶ್ನೆಗಳಾವುವು. ?**

**ಉತ್ತರ :** ಈ ಮಹಿಳೆ ಯಾವ ಅಪಾಯದಲ್ಲಿ ಸಿಲುಕಿದ್ದಾಳೆ? ಆ ಮನೆಯೊಳಗೆ ಏನು ಸಂಭವಿಸುತ್ತಿದೆ?

ತಾನೀಗ ಕದವನ್ನು ತಟ್ಟಿದರೆ ಪರಿಣಾಮವೇನಾಗಬಹುದು ? ಗಡಿ ಪ್ರದೇಶದಲ್ಲಿ ವಿಮಾನದಾಳಿಯಿಂದ ರಕ್ಷಿಸಲು " "ಬ್ಲಾಕ್ ಔಟ್" ನಿಯಮ ಪಾಲಿಸಲಾಗುತ್ತಿದೆ. ಇಂತಹ ಸಮಯದಲ್ಲಿ ಆ ಮನೆಯೊಳಗೆ ಯಾವ ರೀತಿಯ ಕ್ರೌರ್ಯ ನಡೆಯುತ್ತಿದೆ ಎಂಬ ಪ್ರಶ್ನೆ ರಾಹಿಲನು ಮನದಲ್ಲಿ ಮೂಡಿದವು.

**11) ರಾಜರ ಪ್ರಕೃತಿ ಹೇಗಿರುತ್ತದೆ ?**

**ಉತ್ತರ :** ರಾಜರು ಪ್ರಕೃತಿ ಹೇಗೆಂದರೆ ಅಹಂಕಾರ ದಾಹಜ್ವರ ತಲೆಗಡಿರಿ ಅದರ ಬಗೆಯಲ್ಲಿ ಕತ್ತಲು ತುಂಬಿರುತ್ತದೆ ಇದು ಎಲ್ಲಾ ದುಡ್ಡಿನ ಮಹಿಮೆ ದುಡ್ಡ ದುರಭಿಮಾನದ ತವರು ದುಡ್ಡಿನ ಪೈತ್ಯ ಅಡರಿದವರಿಗೆ ಜಗತ್ತೆಲ್ಲ ಕ್ಷದ್ರವಾಗಿ ಕಾಣುತ್ತದೆ ರಾಜ್ಯ ಎನ್ನುವುದು ಒಂದು ವಿಷ ಅಧಿಕಾರದ ಸೋಂಕು ತಾಗಿವರಿಗೆಲ್ಲ ಬುದ್ಧಿ ಮಂಕಾಗಿಬಿಡುತ್ತದೆ.

**12) ದುಷ್ಟಬುದ್ದಿಯು ತನ್ನ ತಂದೆಯನ್ನು ಏಕಾಂತಕ್ಕೆ ಕರೆದು ಹೇಳಿದ ಮಾತುಗಳಾವುವು ?**

**ಉತ್ತರ :** ದುಷ್ಟಬುದ್ಧಿಯು ಮನೆಗೆ ಬಂದವನೆ ತನ್ನ ತಂದೆ ಕೈಹಿಡಿದು ಏಕಾಂತಕ್ಕೆ ಕರೆದುಕೊಂಡು ಹೋಗಿ ನಡೆದ ವೃತ್ತಾಂತವನ್ನೆಲ್ಲ ತಿಳಿಸುತ್ತಾನೆ. " ನಿಮ್ಮ ಒಂದು ವಚನದಿಂದ ನಮ್ಮ ಪರಿವಾರವೆಲ್ಲ ಹಲವು ಕಾಲ ಹಸಿಯದೆ ಸುಖವಾಗಿ ಬಾಳಬಹುದು. ನೀವು ಆ ಮರದ ಪೊಟರೆಯಲ್ಲಿ ಅಡಗಿ ಕುಳಿತು ಧರ್ಮಬುದ್ಧಿಯೇ ಹೊನ್ನನ್ನೆಲ್ಲವನ್ನು ತೆಗೆದುಕೊಂಡು ಹೋಗಿದ್ದಾನೆ ಎಂದು ನುಡಿಯಬೇಕು " ಎಂದು ತನ್ನ ತಂದೆಗೆ ಹೇಳುತ್ತಾನೆ.

**13) ವೃಷಭಾಂಕನು ಸುಕುಮಾರಸ್ವಾಮಿಗೆ ವ್ಯಾದಿಯಿದೆ ಎಂದು ಭಾವಿಸಲು ಕಾರಣವೇನು ?**

**ಉತ್ತರ :** ಅರಸ ವೃಷಭಾಂಕ ಮತ್ತು ಸುಕುಮಾರಸ್ವಾಮಿಯನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ. ಬಂಧುಗಳು. ಪರಿವಾರದವರು ಶುಭಕರವಾದ ಬಿಳಿ ಸಾಸಿವೆಯ ಅಕ್ಷತೆಯನ್ನು ಹಾಕಿದಾಗ, ಸುಕುಮಾರ ಸ್ವಾಮಿಗೆ ಒತ್ತಿದಂತಾಗಿ ಸೊಂಟವನ್ನು ಅಲುಗಾಡಿಸುತ್ತಾನೆ. ದೀಪವನ್ನು ನೋಡಿದಾಗ ಕಣ್ಣೀರು ಸುರುಸುತ್ತಾನೆ. ಊಟ ಮಾಡುವಾಗ ಅರ್ಧ ಆಹಾರವನ್ನು ನುಂಗಿ.ಅರ್ಧ ಆಹಾರವನ್ನು ಉಗುಳುವುದನ್ನು ಕಂಡು ಆಹಾರದ ಮೇಲಿನ ಆರುಚಿಯಿಂದ ಹೀಗೆ ಮಾಡುತ್ತಿದ್ದಾನೆ.ಈತತನಿಗೆ ಏನೋ ವ್ಯಾದಿಯಿರಬಹುದೆಂದು ಅರಸ ಭಾವಿಸುತ್ತಾನೆ.

**14) ಹಲಗಲಿಯ ಬೇಡರು ದಂಗೆ ಏಳಲು ಕಾರಣಗಳೇನು ?**

**ಉತ್ತರ :** ವ್ಯಾಪಾರಕ್ಕಾಗಿ ಬಂದ ಬ್ರಿಟಿಷರು ಆಡಳಿತದ ಸೂತ್ರ ಹಿಡಿದು ನಿಶ್ಯಸ್ತ್ರೀಕರಣ ಕಾಯಿದೆ ಹೇರಿದರು. ಇದರಂತೆ ಸರಕಾರದ ಅನುಮತಿಯಿಲ್ಲದೆ ಶಸ್ತ್ರಾಸ್ತ್ರ ಹೊಂದುವಂತಿಲ್ಲ.ಇದ್ದ ಆಯುಧಗಳನ್ನು ಹಿಂದಿರಿಗಿಸಬೇಕಾಯಿತು. ಹಲಗಲಿಗೆಯ ಬೇಡರು ವಿರೋಧಿಸುತ್ತಾರೆ. ಬೇಡರಾಗಿರುವುದರಿಂದ ಆಯುಧ ವಿಲ್ಲದೆ ಬದುಕುವುದು ಅಸಾಧ್ಯ.ಅಲ್ಲದೆ ಗುಲಾಮ ಗಿರಿಯನ್ನು ಒಪ್ಪಿಗೊಂಡಂತಾಗುತ್ತದೆ ಎಂದು ಕಾರಕೂನನ ಕಪಾಳಕ್ಕೆ ಹೊಡೆಯುತ್ತಾರೆ ಸುದ್ದಿ ತಿಳಿದ ಸಾಹೇಬ ಮತ್ತಷ್ಟು ಸೈನ್ಯವನ್ನು ಕಳಿಸುತ್ತಾನೆ.ರಾಮ ಬಾಲ.ಜಡಗ. ಹನುಮ ಮೊದಲಾದ ವೀರರು ತಮ್ಮಲ್ಲಿದ್ದ ಆಯುಧಗಳನ್ನು ಕೊಡಲೊಪ್ಪದೆ ದಂಗೆ ಎದ್ದರು.

15) **ವಾಲ್ಮೀಕಿ ಆಶ್ರಮಕ್ಕೆ ಯಜ್ಞಾಶ್ವವು ಬಂದ ಬಗೆಯನ್ನು ತಿಳಿಸಿ.** ?

**ಉತ್ತರ :** ರಘುವಂಶದ ರಾಜನಾದ ಶ್ರೀರಾಮನ ಯಾಗದ ಕುದುರೆ ಎಂದು ತಿಳಿದು ಪರಾಕ್ರಮಿಗಳಾದ ರಾಜರು ಕುದುರೆಗೆ ನಮಸ್ಕರಿಸಿ ಕಳಿಸುತ್ತಿದ್ದರು.ಹೀಗೆ ಯಾವಗ ಕುದುರೆ ಭೂಮಿಯಲ್ಲಿ ಸಂಚರಿಸುತ್ತ ವಾಲ್ಮೀಕಿ ಮುನಿಯ ಆಶ್ರಮದ ಕಡೆಗೆ ಬರುತ್ತದೆ.ಮುನಿಯ ಆಶ್ರಮದ ವಿನಿಯೋಗಕ್ಕಾಗಿ ಇದ್ದ ಉದ್ಯಾನವನದಲ್ಲಿ ಬೆಳೆದಿದ್ದ ಹಸಿರು ಹುಲ್ಲನ್ನು ನೋಡಿ ತಿನ್ನಲು ಬಯಸಿ ಯಜ್ಞಾಶ್ವ ವಾಲ್ಮೀಕಿಯ ಆಶ್ರಮದ ವನವನ್ನು ಪ್ರವೇಶಿಸುತ್ತದೆ.

16) **ವಿವೇಕಾನಂದರ ದೃಷ್ಟಿಯಲ್ಲಿ ದೇಶ ಪ್ರಗತಿ ಸ್ಥಿರವಾಗುವುದು ಯಾವಾಗ** ?

**ಉತ್ತರ :** ವಿವೇಕಾನಂದರ ದೃಷ್ಟಿಯಲ್ಲಿ ದೇಶದ ಪ್ರಗತಿ ಸ್ಥಿರವಾಗಬೇಕಾದರೆ ದೇಶದ ಭಾಷೆಯಲ್ಲಿ ಜನರಿಗೆ ಭಾವನೆಗಳನ್ನು ನೀಡಿ ಅವರು ವಿಷಯಗ್ರಹಣ ಮಾಡಿಕೊಳ್ಳುವರು ಆದರೆ ಅವರಿಗೆ ಈ ಸಂಸ್ಕೃತಿಯನ್ನು ಕೊಡುವ ತನಕ ಅವರ ಪ್ರಗತಿ ಸ್ಥಿರವಾಗಲಾರದು. ಅಂದರೆ ಸಂಸ್ಕೃತಿ ಮಾತ್ರ ಆಘಾತವನ್ನು ಸಹಿಸಬಲ್ಲುದು ಕೇವಲ ಜ್ಞಾನರಾಶಿಗೆ ಅದನ್ನು ಎದುರಿಸುವ ಶಕ್ತಿ ಇಲ್ಲ ಸಂಸ್ಕೃತಿಯು ರಕ್ತದಲ್ಲಿ ಹರಿಯಬೇಕು ಆಗ ಮಾತ್ರ ದೇಶದ ಪ್ರಗತಿ ಸ್ಥಿರವಾಗುವುದು.ಇದು ವಿವೇಕಾನಂದರ ದೃಷ್ಟಿಯಾಗಿದೆ.

17) **ಭಗತ್‌ಸಿಂಗ್‌ನ ಸಹೋದರಿಗೆ ಆತನ ಉಪವಾಸದ ಕಾರಣಗಳು ಹೇಗೆ ತಿಳಿದು ಬಂದವು** ?

**ಉತ್ತರ :** ಹನ್ನೆರಡು ವರ್ಷದ ಬಾಲಕ ಶಾಲೆಗೆ ಹೋಗದೆ ಅಮೃತಸರ ಜಲಿಯನ್ ವಾಲಾಬಾಗ್‌ಗೆ ಹೋಗಿ ಅಂತರ್ಮುಖಿಯಾಗಿ ನಿಂತು. ನಂತರ ಅಲ್ಲಿದ್ದ ಮಣ್ಣನ್ನು ಹಣೆಗಿಟ್ಟುಕೊಂಡು, ಇನ್ನಷ್ಟನ್ನು ಡಬ್ಬಿಯಲ್ಲಿ ಶೇಖರಿಸಿಕೊಂಡು ರಾತ್ರಿ ಮನೆಗೆ ಹಿಂದಿರಗಿದಾಗ. ಎಂದಿನಂತೆ ಸಹೋದರಿ ಊಟಕ್ಕೆ ಎಬ್ಬಿಸುತ್ತಾಳೆ.ಪ್ರಿಯವಾದ ಮಾವಿನ ಹಣ್ಣನ್ನು ನೀಡಿದರೂ ಒಲ್ಲೆ ಎನ್ನುತ್ತಾನೆ.ಕಾರಣ ಕೇಳಿದಾಗ ಮನೆಯ ಹಿಂಭಾಗಕ್ಕೆ ಕರೆದೊಯ್ದು ರಕ್ತಸಿಕ್ತವಾದ ಮಣ್ಣನ್ನು ತೋರಿಸುತ್ತಾನೆ. ಅದು ಎಲ್ಲಿಯದೆಂದು ತಿಳಿದಾಗ ಭಗತ್‌ಸಿಂಗ್‌ನ ಉಪವಾಸಕ್ಕೆ ಕಾರಣ ತಿಳಿಯುತ್ತದೆ.

18) **ಮಲೆನಾಡಿನಲ್ಲಿ ದೀಪ ಬತ್ತಿಯ ಸಮಸ್ಯೆಯನ್ನು ಹೇಗೆ ಪರಿಹರಿಸಿಕೊಳ್ಳಲಾಯಿತು** ?

**ಉತ್ತರ :** ಪಶ್ಚಿಮ ಘಟ್ಟದ ಕಾಡುಗಳಲ್ಲಿ ತೊಡಕಲುಕುಡಿ ಎಂಬ ಬೂದು ಬಣ್ಣದ ಗಿಡದ ಎಳೆಯ ಕುಡಿ ಸಂಗ್ರಹಿಸಿ ಒಣಗಿಸಿ ಡಬ್ಬದಲ್ಲಿ ಶೇಖರಿಸಿಡಲಾಗುತ್ತಿತ್ತು. ಒಣಗಿದ ಕುಡಿಯನ್ನು ಎಣ್ಣೆಯನ್ನು ಅದ್ದಿ ನಿತ್ಯ ಆರತಿಗೆ ಬಳಸಲಾಗುತ್ತಿತ್ತು. ಇದು ಎಣ್ಣೆಯನ್ನು ಹತ್ತಿಯಂತೆ ಹೀರಿಕೊಂಡ ದೀಪ ಉರಿಯಲು ಸಹಾಯಕವಾಗಿತ್ತು.ನಾಗ ಸಂಪಿಗೆ ಬೀಜಗಳನ್ನು ಕುಟ್ಟಿ ಚಿಕ್ಕ ಚಿಕ್ಕ ಉಂಡೆಗಳನ್ನು ಕಟ್ಟಿ ಉರಿಸಲಾಗುತ್ತಿತ್ತು ಇದ್ದರಲ್ಲದೇ ಅಡಿಕೆ ತೋಟಗಳಂಚಿನಲ್ಲಿ ಬೆಳೆಯುತ್ತಿದ್ದ ಜವಾರಿ ಹತ್ತಿ ಗಿಡಗಳ ಹತ್ತಿಯನ್ನು ದೀಪಕ್ಕೆ ಬಳಸುವ ಮೂಲಕ ಮಲೆನಾಡಿನಲ್ಲಿ ದೀಪದ ಬತ್ತಿಯ ಸಮಸ್ಯೆಯನ್ನು ಪರಿಹರಿಸಿಕೊಳ್ಳಲಾಯಿತು.

19) **ಪೈಗಳ ತಮ್ಮನ ನೂಲುಮದುವೆಯ ದಿನ ಅಂಗಳದಲ್ಲಿ ಏನೇನು ಸಿದ್ಧತೆಗಳಾಗುತ್ತಿದ್ದವು** ?

**ಉತ್ತರ :** ಪೈಗಳ ತಮ್ಮನ ನೂಲುಮದುವೆಯ ದಿನ ಅಂಗಳದಲ್ಲಿ ಒಂದು ಕಡೆಯಲ್ಲಿ ಲಡ್ಡುಗೆಗಳನ್ನು ಕಟ್ಟುತ್ತಿದ್ದರು. ಮತ್ತೊಂದು ಕಡೆ ಮಂಡಿಗೆಗಳನ್ನು ಮಡಚುತ್ತಿದ್ದರು. ಬೇರೊಂದು ಕಡೆ ಸೇವೆಗೆಯನ್ನು ಒತ್ತುತ್ತಿದ್ದರು ಹೀಗೆ ಇನ್ನೂ ಮುಂತಾದ ಸಿದ್ಧತೆಗಳಾಗುತ್ತಿದ್ದವು.

**III. ಕೆಳಗಿನವಾಕ್ಯ ಅಥವಾ ಹೇಳಿಕೆಗೆಸಂದರ್ಭಮತ್ತು ಸ್ವಾರಸ್ಯಗಳನ್ನು ಬರೆಯಿರಿ. 4X3=12**

20) **"ಪ್ರವಾಸವು ಶಿಕ್ಷಣದ ಒಂದು ಭಾಗವಾಗಿದೆ "**

**ಉತ್ತರ :**

**ಆಯ್ಕೆ :** ಪ್ರಸ್ತುತ ಹೇಳಿಕೆಯನ್ನು ವಿ.ಕೃ.ಗೋಕಾಕ್‌ರು ಬರೆದ 'ಸಮುದ್ರದಾಚೆಯಿಂದ' ಎಂಬ ಪ್ರವಾಸಕಥನದಿಂದ ಆಯ್ದ 'ಲಂಡನ್ ನಗರ ' ಎಂಬ ಗದ್ಯಭಾಗದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ :** ಲಂಡನ್ ನಗರದ ಪ್ರವಾಸದ ಅನುಭಗಳನ್ನು ಲೇಖಕರು ದಾಖಲಿಸುತ್ತ ತಮ್ಮ ಅನುಭವಗಳನ್ನು ವ್ಯಕ್ತಪಡಿಸುವ ಸಂದರ್ಭದಲ್ಲಿ ಬೇಕನ್ ಹೇಳಿದ ಮಾತನ್ನು ಸ್ಮರಿಸುತ್ತಾರೆ. ಕಡಿಮೆ ದಿನಗಳಲ್ಲಿ ಮನಸ್ಸು ವಿಕಾಸಗೊಂಡಿದೆ, ದೃಷ್ಟಿ ವಿಶಾಲವಾಗಿದೆ,ಸಂಸ್ಕೃತಿ ಒರೆಗಲ್ಲಿನ ಮೇಲೆ ನಿಂತಿದೆ ಎಂದು ನೆನಸುತ್ತ ಬೇಕನ್ ಹೇಳಿದ ಮಾತನ್ನು ನೆನಪಿಸಿಕೊಳ್ಳುವ ಸಂದರ್ಭದಲ್ಲಿ ಈ ಸಹಕಾರಿ ಎಂಬುದು ಇಲ್ಲಿನ ಸ್ವಾರಸ್ಯವಾಗಿದೆ.

**ಸ್ವಾರಸ್ಯ :** ' ದೇಶ ಸುತ್ತು ಕೋಶ ಓದು ' ಎಂದು ಗಾದೆಯನ್ನು ಇದು ಅರ್ಥೈಸುತ್ತದೆ. ದೇಶ–ವಿದೇಶಗಳ ಪ್ರವಾಸದ ಅನುಭವವು ಜ್ಞಾನಾಭಿವೃದ್ಧಿಗೆ ಸಹಕಾರಿ ಎಂಬುದು ಇಲ್ಲಿನ ಸ್ವಾರಸ್ಯವಾಗಿದೆ.

21) **"ನನ್ನ ಮೊಮ್ಮಗುವಿನ ಹೆಣದಿದೆ ಅಲ್ಲಿ ;ಅದನ್ನೂ ನೋಡಿ! "**

**ಉತ್ತರ :**

**ಆಯ್ಕೆ :** ಪ್ರಸ್ತುತ ಹೇಳಿಕೆಯನ್ನು ಸಾರಾ ಅಬೂಬಕ್ಕರ ಅವರು ರಚಿಸಿದರುವ "ಚಪ್ಪಲಿಗಳು" ಕವನ ಸಂಕಲನ ದಿಂದ ಆಯ್ದ "ಯುದ್ಧ" ಎಂಬ ಗದ್ಯ ಭಾಗದಿಂದ ಆರಿಸಿಕೊಳ್ಳಲಾಗಿದೆ

**ಸಂದರ್ಭ :** ಸೈನಿಕ ಉಡುಪಿನಲ್ಲಿದ್ದ ನಾಲ್ಕೈದು ಜನರು "ಯಾರಾದರೂ ಗಾಯಗೊಂಡ ಸೈನಿಕರು ಈ ಕಡೆ ಬಂದಿದ್ದಾರೆಯೇ?"ಎಂದು ಕೇಳುತ್ತಾಮುದುಕಿಯ ಮನೆಗೆ ನುಗ್ಗಿದಾಗ ಮುದುಕಿಯ "ಇಲ್ಲವಲ್ಲಾ" ಎನ್ನುತಾಳೆ ಆಗ ಅಧಿಕಾರಿ "ಆದರೂ ಈ ಮನೆಯಲ್ಲೊಮ್ಮೆ ನೋಡಿಬಿಡಿ"

ಎಂದು ಸೈನಿಕರಿಗೆ ಅಪ್ಪಣೆ ಮಾಡಿದ ಸಂದರ್ಭದಲ್ಲಿ ರಾಹಿಲನ್ನು ರಕ್ಷಿಸುವ ಸಲುವಾಗಿ ಮುದುಕಿ "ಹೂಂ – ನೋಡಿ" ನನ್ನ ಮೊಮ್ಮಗುವನ್ನು ಉಳಿಸಲಿಲ್ಲವಲ್ಲ? ಯಾರಿಗಾಗಿ ಯಾತಕ್ಕಾಗಿ ಈ ಯುದ್ಧ?.......ಎಂದು ನಿರ್ಜೀವ ಮಗುವಿನ ಬಳಿ ಕುಳಿತು ಎದೆ ಬಡಿದು ಕೊಂಡು ಅಳುತ್ತಾಳೆ.ಆಗ ಅವರೆಲ್ಲಾ ಹೊರಟು ಹೋಗುತ್ತಾರೆ.

**ಸ್ವಾರಸ್ಯ :** ಶತ್ರು ದೇಶದವನಾದರೂ ತನ್ನ ಗಾಯವನ್ನು ಸಹಿಸಿಕೊಂಡು ಸೊಸೆಯ ಪ್ರಾಣು ಉಳಿಸಿದ ರಾಹಿಲನನ್ನು ರಕ್ಷಿಸಲು ಮುದುಕಿಯ ಉಪಾಯ ಮತ್ತು ಮಾನದೀಯತಾ ಗುಣ ಇಲ್ಲಿ ವ್ಯಕ್ತವಾಗಿದೆ.

**22) "ಸಾರ್ವಭೌಮರಾ ನೆತ್ತಿಯ ಕುಕ್ಕಿ "**

**ಉತ್ತರ :**

**ಆಯ್ಕೆ :** ಪ್ರಸ್ತುತ ಹೇಳಿಕೆಯನ್ನು ಕವಿ ದ.ರಾ. ಬೇಂದ್ರೆಯವರು ರಚಿಸಿದ 'ಗರಿ' ಕವನ ಸಂಕಲನದಿಂದ ಆಯ್ದ 'ಹಕ್ಕಿಹಾರುತಿರುತಿದೆ ನೋಡಿದಿರಾ ' ಎಂಬ ಕವಿತೆಯಿಂದ ಆಯ್ದುಕೊಳ್ಳಲಾಗಿದೆ.

**ಸಂದರ್ಭ :** ಕಾಲದ ಸುಳಿಯಲ್ಲಿ ಎಲ್ಲರೂ ಸಮಾನರು. ನಿಸರ್ಗದತ್ತವಾದ ಕಾಲಚಕ್ರದಲ್ಲಿ ಎಂತಹ ಪ್ರಭಾವಶಾಲಿಯಾದರೂ ತಲೆಬಾಗಲೇಬೇಕು.ಪ್ರತಿಯೊಂದು ಘಟನೆಯೂ ಕಾಲ ಉರುಳಿದಂತೆ ಇತಿಹಾಸವಾಗುತ್ತದೆ ಬ್ರಿಟಿಷರ ಸಾಮ್ರಾಜ್ಯಶಾಹಿ ಆಡಳಿತ ಅನೇಕ ಕೋಟೆ ಕೊತ್ತಲಗಳನ್ನು ತೇಲಿಸಿ, ಮುಳುಗಿಸುವಂತೆ ಮಾಡಿತು. ಎಂತಹ ಸಾರ್ವಭೌಮರನ್ನು ಸಹ ಕಾಲ ಬಿಡಲಿಲ್ಲ ಎಂಬುದನ್ನು ಹೇಳುವ ಸಂದರ್ಭದಲ್ಲಿ ಈ ಮಾತನ್ನು ಕವಿ ಹೇಳಿದ್ದಾರೆ.

**ಸ್ವಾರಸ್ಯ :** ಚಲನಶೀಲವಾದ ಕಾಲಕ್ಕೆ ಎಲ್ಲರೂ ತಲೆಬಾಗಲೇಬೇಕು. ಕಾಲದ ಸುಳಿಯಲ್ಲಿ ಸಿಲುಕದೆ ಇರುವ ವ್ಯಕ್ತಿ ಯಾರೊಬ್ಬರೂ ಇಲ್ಲ ಎಂಬುದನ್ನು ಧ್ವನಿಸುತ್ತದೆ.

**23) "ಬೇರೆ ಬಣ್ಣವನೆ ಕಾಣೆ "**

**ಉತ್ತರ :**

**ಆಯ್ಕೆ :** ಪ್ರಸ್ತುತ ಹೇಳಿಕೆಯನ್ನು ಕುವೆಂಪು ಅವರು ರಚಿಸಿರುವ ' ಪಕ್ಷಿಕಾಶಿ' ಕವನ ಸಂಕಲನದಿಂದ ಆಯ್ದ ' ಹಸುರು' ಎಂಬ ಕವನದಿಂದ ಆಯ್ದುಕೊಳ್ಳಲಾಗಿದೆ.

**ಸಂದರ್ಭ :** ಆಶ್ವಯುಜ ಮಾಸದ ನವರಾತ್ರಿಯ ಸಂದರ್ಭದಲ್ಲಿ ಪ್ರಕೃತಿಯಲ್ಲಿ ಹೆಪ್ಪುಗಟ್ಟಿದ ಹಚ್ಚಹಸುರಾದ ಪ್ರಕೃತಿ ಸೌಂದರ್ಯವನ್ನು ನೋಡಿ. ಎಲ್ಲಿ ನೊಡಿದರಲ್ಲಿ ಹಸುರು ತುಂಬಿದೆ ಇಡೀ ಭೂಮಿಗೆ ಹಚ್ಚಹಸುರು ಬಣ್ಣದ ಮಕಮಲ್ಲಿನ ಜಮಖಾನೆಯನ್ನು ಹಾಸಿ ಮುಚ್ಚಿದಂತೆ ತೋರುತ್ತಿದೆ.ಹಸಿರು ಬಣ್ಣವೊಂದನ್ನು ಬಿಟ್ಟು ಬೇರೆ ಯಾವ ಬಣ್ಣವೂ ಕಾಣುತ್ತಿಲ್ಲ ಎಂಬುದನ್ನು ಕವಿ ಕುವೆಂಪು ಅವರು ಮೇಲಿನಂತೆ ಹೇಳಿದ್ದಾರೆ.

**ಸ್ವಾರಸ್ಯ :** ಮಲೆನಾಡಿನ ಪ್ರಕೃತಿ ಸೌಂದರ್ಯ ಹಾಗೂ ಪ್ರಕೃತಿಯ ಹಸುರಿನಲ್ಲಿ ಕವಿ ಮನ ತಲ್ಲೀನರಾಗಿರುವುದು ಸ್ವಾರಸ್ಯಕರವಾಗಿ ಮೂಡಿ ಬಂದಿದೆ.

**IV. ಈ ಕೆಳಗಿನ ಸಾಹಿತಿ/ಕವಿಗಳ ಜನ್ಮಸ್ಥಳ.ಕಾಲ ಕೃತಿಮತ್ತು ಪ್ರಶಸ್ತಿ/ ಬಿರುದುಗಳನ್ನು ಕುರಿತು ವಾಕ್ಯರೂಪದಲ್ಲಿಬರೆಯುವುದು : 3X2=6**

**24.) ಪು.ತಿ ನರಸಿಂಹಾಚಾರ್**

**ಉತ್ತರ :** ಪು.ತಿ.ನ. ಕಾವ್ಯನಾಮದಿಂದ ಪ್ರಸಿದ್ದರಾಗಿರುವ ಪುರೋಹಿತ ತಿರುನಾರಾಯಣಯ್ಯಂಗಾರ್ಯ ನರಸಿಂಹಾಚಾರ್ ವರು 1905 ರಲ್ಲಿ ಮಂಡ್ಯ ಜಿಲ್ಲೆಯ ಮೇಲುಕೋಟೆಯಲ್ಲಿ ಜನಿಸಿದರು. ಕನ್ನಡ ವಿಶ್ವಕೋಶದ ಭಾಷಾಂತರಕಾರರಾಗಿ, ಮೈಸೂರು ವಿಶ್ವ ವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟು ಸಂಪಾದಕರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಇವರು ಗೀತನಾಟಕ, ಕವಿತೆ, ಸಣ್ಣಕತೆ, ಪ್ರಬಂಧ, ವಿಚಾರಸಾಹಿತ್ಯ ಮೊದಲಾದ ಪ್ರಕಾರಗಳ್ಳಿ ಸಾಹಿತ್ಯ ರಚಿಸಿದ್ದಾರೆ.ಇವರು ಅಹಲ್ಯೆ, ಗೋಕುಲನಿರ್ಗಮನ, ಶಬರಿ.ವಿಕಟಕವಿ ವಿಜಯ, ಹಂಸದಮಯಂತಿ ಮತ್ತು ಇತರ ರೂಪಕಗಳು, ಹಣತೆ, ರಸಸರಸ್ವತಿ,ಗಣೇಶದರ್ಶನ, ಶಾರದಯಾಮಿನಿ,

ಶ್ರೀ ಹರಿಚರಿತೆ, ರಥಸಪ್ತಮಿ ಎಂಬ ಕೃತಿಗಳನ್ನು ರಚಿಸಿದ್ದಾರೆ. ಹಂಸದಮಯಂತಿ ಮತ್ತು ಇತರ ರೂಪಕಗಳು ಕೃತಿಗೆ ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ ' ಶ್ರೀ ಹರಿಚರಿತೆ ' ಕಾವ್ಯಕ್ಕೆ 'ಪಂಪ ಪ್ರಶಸ್ತಿ' ಲಭಿಸಿದೆ. ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಿ.ಲಿಟ್.ಪದವಿ ನೀಡಿ ಗೌರವಿಸಿ. ಚಿಕ್ಕಮಗಳೂರಿನಲ್ಲಿ 1981 ರಲ್ಲಿ ನೆಡದ 53 ನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

**25) ಪಂಪ :**

**ಉತ್ತರ :** ಆದಿ ಕವಿ ಎಂದೇ ಹೆಸರಾದ ಪಂಪ ಕ್ರಿ.ಶ.941 ರಲ್ಲಿ ವೆಂಗಿ ಮಂಡಲದ ವೆಂಗಿಪಳು ಎಂಬ ಅಗ್ರಹಾರದಲ್ಲಿ ಜನಿಸಿದನು. ಕೃಷ್ಣಾ ಮತ್ತು ಗೋದಾವರಿ ನದಿಗಳ ನಡುವಿನ ಸ್ಥಳವಾದ ವೆಂಗಿಪಳು ನಿಸರ್ಗ ಸೌಂದರ್ಯದ ತಾಣ ಚಾಲುಕ್ಯರ ಅರಿಕೇಸರಿಯ ಅಸ್ಥಾನ ಕವಿಯಾಗಿದ್ದ ಈತ " ಆದಿಪುರಾಣ" ಮತ್ತು "ವಿಕ್ರಮಾರ್ಜುನ ವಿಜಯಂ" ಎಂಬ ಮಹಾಕಾವ್ಯವನ್ನು ರಚಿಸಿದ್ದಾನೆ. "ವಿಕ್ರಮಾರ್ಜನ ವಿಜಯ" ಕ್ಕೆ "ಪಂಪ ಭಾರತ" ಎಂಬ ಮತ್ತೊಂದು ಹೆಸರಿದೆ. ವೇದವ್ಯಾಸರ ಮಹಾಭಾರತವನ್ನು ಆಧರಿಸಿ ಬರೆದ ಈ ಕೃತಿಯಲ್ಲಿ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿದ್ದಾನೆ. ಇದೊಂದು ಲೌಕಿಕ ಕಾವ್ಯವೆಂದು ಘೋಷಿಸಿದ್ದಾನೆ ಕವಿಯೂ ಕಲಿಯೂ ಆಗಿದ್ದ ಪಂಪ ರತ್ನತ್ರಯರಲ್ಲಿ ಒಬ್ಬ. ಸರಸ್ವತೀಮಣಿಹಾರ,ಸಂಸಾರ ಸಾರೋದಯ, ಕವಿತಾಗುಣಾರ್ಣವ ಎಂಬ ಬಿರುದುಗಳನ್ನು ಪಡೆದಿದ್ದ ಪ್ರಸಿದ್ಧಕವಿ ಎಂದರೆ ಪಂಪ.

**V. ಈ ಕೆಳಗಿನ ಪದ್ಯಭಾಗ ಪೂರ್ಣಗೊಳಿಸಿ ಬರೆಯಿರಿ 1X4=4**

26) ನೆಲಕಿವವೆನೆಂದು ಬಗೆದಿರೆ ॥

ಚಲಕಿವವೆಂ ಪಾಂಡುಸುತರೊಳೀನೆಲನಿದು ಪಾ ॥

ನ್ನೆಲನೆನಗೆ ದಿನಪಸುತನಂ ॥

ಕೊಲಿಸಿದ ನೆಲನೊಡನೆ ಮತ್ತೆ ಪುದುವಾವ್ವಿಪೆನೇ ॥

ಅಥವಾ

ಪುಟ್ಟಿದ ನೂರ್ವರುಮೆನ್ನೊಡ ।

ವುಟ್ಟಿದ ನೂರ್ವರುಮಿದಿರ್ಚಿ ಸತ್ತೊಡೆ ಕೊಪಂ ॥

ಪುಟ್ಟಿ ಮೊದಮ್ಮಿದು ಸತ್ತರ್

ಪುಟ್ಟರೆ ಪಾಂಡವರೊಳಿಹದು ಛಲಮನೆ ಮೆವೆಂ ॥

**27) ಪದ್ಯಭಾಗವನ್ನು ಓದಿ ಅರ್ಥಮಾಡಿಕೊಂಡು, ಮೌಲ್ಯವನ್ನಾದರಿಸಿ ಸಾರಾಂಶ ಬರೆಯುವುದು**

ಬಿದ್ದುದನ್ನು ಮೇಲೆಬ್ಬಿಸಿ ನಿಲ್ಲಿಸಿ

ಹೊಸ ಭರವಸೆಗಳ ಕಟ್ಟೋಣ

ಮನಜರ ನಡುವಣ ಅಡ್ಡಗೋಡೆಗಳ

ಕೆಡವುತ ಸೇತುವೆಯಾಗೋಣ.

**ಉತ್ತರ :** ಕವಿ ಜಿ ಎಸ್, ಶಿವರುದ್ರಪ್ಪನವರು "ಸಂಕಲ್ಪಗೀತೆ" ಎಂಬ ಕವನದಲ್ಲಿ ದೃಢಸಂಕಲ್ಪದಿಂದ ಹೇಗೆ ಯಶಸ್ಸುಗಳಿಸಬಹುದು ಎಂಬುದನ್ನು ಹೇಳಿದ್ದಾರೆ ಜೀವನದಲ್ಲಿ ಧನಾತ್ಮಕ ಭಾವನೆಯನ್ನು ಹೊಂದಿರಬೇಕು ಯಾವುದೇ ರೀತಿ ಸವಾಲುಗಳು ಎದುರಾದರು ದೃಢಸಂಕಲ್ಪ, ಆತ್ಮವಿಶ್ವಾಸದಿಂದ ಕ್ರಿಯಾಶೀಲರಾದಾಗ ಯಶಸ್ಸು ಸಿಗುತ್ತದೆ. ಜೀವನದಲ್ಲಿ ಬೇರೆ ಬೇರೆ ಜಾತಿ, ಮತಗಳಲ್ಲಿ ಮುಳುಗಿ ಹೋಗಿದ್ದಾನೆ. ಅವರಲ್ಲಿ ನಾವೆಲ್ಲರೂ ಒಂದೇ ಎಂಬ ಭಾವನೆ ಭರವಸೆಯನ್ನು ಬಿತ್ತಬೇಕು.ಮನುಷ್ಯ–ಮನುಷ್ಯರ ನಡುವೆ ಕಂದಕವನ್ನು ಸೃಷ್ಟಿಸಿರುವ ಜಾತಿ ಎಂಬ ಗೋಡೆಯನ್ನು ಕೆಡವಿ ಎಲ್ಲರನ್ನೂ ಒಗ್ಗೂಡಿಸುವ ಸೇತುವೆಯನ್ನು ನಿರ್ಮಿಸಬೇಕು.ಭೇದಭಾವವನ್ನು ಹೋಗಲಾಡಿಸಿ ಐಕ್ಯದಿಂದ ಪ್ರಯತ್ನಶೀಲರಾದಾಗ ಬಲವೃದ್ಧಿಸುತ್ತದೆ."ವಸುದೈವ ಕುಟುಂಬ" ಎಂಬಂತೆ ಇಡೀ ವಿಶ್ವವೇ ಕುಟುಂಬವಾಗಬೇಕು. ಆಗ ಅಸಾಧ್ಯವಾದುದು ಯಾವುದೂ ಇಲ್ಲ ಎಂಬಂತೆ ಯಶಸ್ಸನ್ನು ಸಾಧಿಸಬಹುದು ಪಂಪ ಮಹಾಕವಿ ಹೇಳಿದಂತೆ " ಮಾನವಕುಲ ತಾನೊಂದೆ ವಲಂ " ಮನುಷ್ಯಕುಲವೊಂದೇ ಶ್ರೇಷ್ಠವಾದುದು. ಅದ್ದರಿಂದ ನಮ್ಮಲ್ಲಿರುವ ಭೇದ–ಭಾವ ಎಂಬ ಸಂಕುಚಿತ ಮನೋಭಾವವನ್ನು ದೂರಮಾಡಿ ಎಲ್ಲರೂ ಐಕ್ಯತೆಯಿಂದ ಬಾಳಬೇಕೆಂಬುವ ದೃಢಸಂಕಲ್ಪವನ್ನು ಕೈಗೊಳ್ಳಬೇಕೆಂಬುದೇ ಪ್ರಸ್ತುತ ಪದ್ಯಭಾಗ ಮೌಲ್ಯವಾಗಿದೆ.

**VII. ಕೆಳಗಿನ ಪ್ರಶ್ನೆಗಳಿಗೆ ಎಂಟು–ಹತ್ತು ವಾಕ್ಯಗಳಲ್ಲಿ ಉತ್ತರಿಸಿ 2X4=8**

**28 ಮೈಸೂರು ಸಂಸ್ಥಾನ ' ಮಾದರಿ ಮೈಸೂರು ರಾಜ್ಯ 'ಎಂಬ ಕೀರ್ತಿಗೆ ಪಾತ್ರವಾಗುವಲ್ಲಿ ನಾಲ್ವಡಿ ಕೃಷ್ಣರಾಜಒಡೆಯರ ಪಾತ್ರವೇನು ? ವಿವರಿ ಅಥವಾ ಶಿಕ್ಷಣ ಕ್ಷೇತ್ರಕ್ಕೆ ವಿಶ್ವೇಶ್ವರಯ್ಯ ಅವರು ಸಲ್ಲಿಸಿದ ಕೊಡುಗೆಯನ್ನು ತಿಳಿಸಿ ?**

**ಉತ್ತರ:** ನಾಲ್ವಡಿ ಕೃಷ್ಣರಾಜ ಒಡೆಯರ 1902 ಆಗಸ್ಟ್ 8 ರಿಂದ ಮೈಸೂರು ರಾಜ್ಯದ ನೇರ ಉಸ್ತುವಾರಿಯನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡು ದಿವಾನರಾಗಿದ್ದ ಸರ್.ಕೆ ಶೇಷಾದ್ರಿಯವರ ಸಹಕಾರದಿಂದ ಮೈಸೂರು ರಾಜ್ಯದ ಸರ್ವತೋಮುಖ ಅಭಿವೃದ್ದಿಗೆ ಕಂಕಣಬದ್ಧರಾದರು. ಅರಸುಮನೆತನ ದಿಂದ ಬಂದವರಾದರೂ,ಜನತೆ ಆಡಳಿತದಲ್ಲಿ ಪಾಲ್ಗೋಳ್ಳುವುದರ ಪರವಾಗಿದ್ದರು. 'ಪ್ರಜಾಪ್ರತಿನಿಧಿ ಸಭೆ'ಯನ್ನು ಶಾಸನಬದ್ಧ 1923 ರಲ್ಲಿ ಕಾನೂನೊಂದನ್ನು ಜಾರಿಗೆ ತಂದು "ಪ್ರಜಾಪ್ರತಿನಿದಿಸಭೆ ' ಯನ್ನು ಶಾನಬದ್ಧ ಸಂಸ್ಥೆಯನ್ನಾಗಿಸಿದರು. ವರ್ಷಕ್ಕೆ ಎರಡು ಬಾರಿ ಸಮಾವೇಶಗೊಂಡು ಕಲಾಪ ನಡೆಸಿ ವಾರ್ಷಿಕ ಆಯವ್ಯಯ, ಪರೀಶಿಲನೆ ಪ್ರಶ್ನೋತ್ತರ ಠರಾವು ಮಂಡಿಸಲಾಗುತ್ತಿತ್ತು ಹೆಚ್ಚಿನ ಸದಸ್ಯರು ಜನರಿಂದಲೇ ಆಯ್ಕೆಯಾಗುತ್ತಿದ್ದರು 1907 ರಲ್ಲಿ ' ನ್ಯಾಯ ವಿಧಾಯಕ ಸಭೆ 'ಸ್ಥಾಪಿಸಿದರು ಇದು ಮೇಲ್ಮನೆಯ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿತ್ತು. ಬೆಂಗಳೂರಿನಲ್ಲಿ ಎರಡು ಬಾರಿ ಸಮಾವೇಶಗೊಂಡು ಪ್ರಜಾಪ್ರತಿನಿಧಿ ಸಭೆಯಲ್ಲಿ ಮಂಡಿಸಿದ ಎಲ್ಲವನ್ನು ವಿಮರ್ಶಿಸುವ,ಕಾನೂನನ್ನು ಜಾರಿಗೆ ತರುವ ಅಧಿಕಾರ ಇದ್ದಿತು. ಗ್ರಾಮ ನಿರ್ಮಲೀಕರಣ, ವೈದ್ಯ ಸಹಾಯ, ವಿದ್ಯಾ ಪ್ರಚಾರ, ನೀರಿನ ಸೌಕರ್ಯ, ಪ್ರಯಾಣ ಸೌಲಭ್ಯ ಮುಂತಾದ ಕ್ಷೇತ್ರಗಳು ಸ್ವಯಂ ಆಡಳಿತ ಕ್ಷೇತ್ರಗಳಾದವು. ಶಿವನಸಮುದ್ರದ ಬಳಿ ಕಾವೇರಿ ನದಿಯಿಂದ ಜಲವಿದ್ಯುತ್ ಉತ್ಪಾದನಾ ಕೇಂದ್ರ ವಾಣಿವಿಲಾಸ ಸಾಗರ ಕೃಷ್ಣಸಾಗರ ಜಲಾಶಯಗಳನ್ನು ನಿರ್ಮಿಸಿದರು ಉಚಿತ ಪ್ರಾಥಮಿಕ , ಮಾಧ್ಯಮಿಕ ಶಿಕ್ಷಣ ಜಾರಿಗೆ ತಂದರು. ಮೈಸೂರು ವಿಶ್ವವಿದ್ಯಾನಿಲಯ ಉಚಿತ ಆಸ್ಪತ್ರೆ, ಮೈಸೂರು ಬ್ಯಾಂಕ್ , ಸಹಕಾರ ಸಂಘಗಳನ್ನು ಸ್ಥಾಪಿಸಿದವರು. ಹಲವಾರು ಸಾಮಾಜಿಕ ಕಾನೂನುಗಳನ್ನು ಮಾಡಿ ಮೈಸೂರು ಸಂಸ್ಥಾನವನ್ನು ಮಾದರಿ ಮೈಸೂರು ರಾಜ್ಯವನ್ನಾಗಿ ರೂಪಿಸಿ 'ಸಾಮಾಜಿಕ ಕಾನೂನುಗಳ ಹರಿಕಾರ' ಎಂಬ ಕೀರ್ತಿಗೆ ಪಾತ್ರರಾದರು.

**ಉತ್ತರ :** ಆಧುನಿಕ ಶಿಕ್ಷಣ ಎಲ್ಲಾ ಸಮಸ್ಯೆಗಳಿಗೂ ಪರಮೋಚ್ಚ ಪರಿಹಾರ ಎಂದು ವಿಶ್ವೇಶ್ವರಯ್ಯನವರು ನಂಬಿದ್ದರು. ಶಿಕ್ಷಣವೇ ಸಂಜೀವಿನಿ ಎಂಬುದನ್ನು ಅರಿತು ಶಿಕ್ಷಣದ ವಿವಿಧ ಯೋಜನೆಗಳನ್ನು ರೂಪಿಸಿದರು 1913 ರಲ್ಲಿ ಪ್ರಾಥಮಿಕ ಶಿಕ್ಷಣ ನಿಬಂಧನೆಯನ್ನು ಜಾರಿಗೆ ತಂದರು. ಮದ್ರಾಸ್ ವಿಶ್ವವಿದ್ಯಾನಿಲಯದ ನಿಯಂತ್ರಣದಲ್ಲಿದ್ದ ಪ್ರೌಢಶಿಕ್ಷಣ ಶಾಲೆಗಳನ್ನು ಬದಲಿಸಿ.ಮೈಸೂರು ಸಂಸ್ಥಾನವೇ ಪ್ರತ್ಯೇಕವಾಗಿ ಪ್ರೌಢ ಶಿಕ್ಷಣದ ಅಂತಿಮ ಪರೀಕ್ಷೆ ನಡೆಸುವ ಯೋಜನೆಯನ್ನು ಆರ್ಥಿಕ ಪರಿಷತ್ತಿನ ಮೂಲಕ ರೂಪೂಗೊಳಿಸಿದರು. ಇದರ ಕಾಲದಲ್ಲಿಯೇ ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆಯಾಯಿತು. ಶಿಕ್ಷಣಕ್ಕಾಗಿ ಶಿಕ್ಷಣವಿರಬೇಕು ಅದು ಕೆಲವೇ ಜನರ ಸ್ವತ್ತಾಗದೆ ಪ್ರಗತಿಪರ ರಾಜ್ಯದಲ್ಲಿ ಎಲ್ಲರ ಆಜನ್ಮಸಿದ್ಧ ಹಕ್ಕಾಗಬೇಕು ಎಂಬುದನ್ನು ಅರಿತಿದ್ದ ಇವರು ತಾಂತ್ರಿಕ ವೃತ್ತಿಪರ ಶಿಕ್ಷಣಕ್ಕೆ ಅದ್ಯತೆ ನೀಡಿದರು. ಬೆಂಗಳೂರಿನಲ್ಲಿ ಮೆಕಾನಿಕ್ ಇಂಜನಿಯರಿಂಗ್ ಶಾಲೆ. ಮೈಸೂರಿನಲ್ಲಿ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ ಸ್ಥಾಪಿಸಿದರು. ಏಕೀಕೃತ ಕರ್ನಾಟಕ ರಚನೆ ಹಾಗೂ ಕನ್ನಡ ಭಾಷೆ ಸಾಹಿತ್ಯಗಳ ಮೇಲೆ ಜನರಿಗಿದ್ದ ಒಲವನ್ನು ಮನಗಂಡು 'ಕನ್ನಡ ಸಾಹಿತ್ಯ' ಪರಿಷತ್ತನ್ನು ಸ್ಥಾಪಿಸಿದ್ದು ವಿಶ್ವೇಶ್ವರಯ್ಯ ಅವರು ಶಿಕ್ಷಣ ಕ್ಷೇತ್ರಕ್ಕೆ ನೀಡಿದ್ದ ಕೊಡುಗೆಗೆ ಕೈಗನ್ನಡಿಯಾಗಿದೆ.

**29) ತನ್ನ ಜನ್ಮರಹಸ್ಯ ತಿಳಿದಾಗ ಕರ್ಣನ ಮನದಲ್ಲಿ ಮೂಡಿದ ಭಾವನೆಗಳೇನು ? ಅಥವಾ ಶ್ರೀಕೃಷ್ಣನು ಕರ್ಣನಿಗೆ ಒಡ್ಡಿದ ಆಮಿಷಗಳನ್ನು ಕುರಿತು ಬರೆಯಿರಿ.**

**ಉತ್ತರ :** ದುರ್ಯೋಧನ ಪಾಂಡವರನ್ನು ದ್ಯೂತದಲ್ಲಿ ಸೋಲಿಸುತಾನೆ ಪಣದಂತೆ 12 ವರ್ಷ ವನವಾಸಒಂದು ವರ್ಷ ಅಜ್ಞಾತವಾಸ ಮುಗಿಸಿ ಬಂದ ಪಾಂಡವರು ತಮ್ಮ ಪಾಲಿನ ರಾಜ್ಯವನ್ನು ಕೇಳಿದಾಗ ದುರ್ಯೋಧನ ಕೊಡಲು ನಿರಾಕರಿಸುತ್ತಾನೆ. ಸಂಧಾನದ ಮೂಲಕ ರಾಜ್ಯವನ್ನು ಕೇಳಿದಾಗ ದುರ್ಯೋಧನ ಕೊಡಲು ನಿರಾಕರಿಸುತ್ತಾನೆ. ಸಂಧಿ ಮುರಿದು ಬಿದ್ದು ಯುದ್ದವೇ ಸಿದ್ಧ ಎಂದು ತೀರ್ಮಾನವಾದಾಗ ಕೌರವರ ಸೇವೆಯಲ್ಲಿದ್ದ ಕರ್ಣನೇ ಪಾಂಡವರಿಗೆ ಪ್ರಬಲ ಎದುರಾಳಿ. ಆತನಿಂದ ಪಾಂಡವರನ್ನು ರಕ್ಷಿಸಬೇಕೆಂದು ಬಗೆದು ಕರ್ಣನಿಗೆ

ಆತನ ಜನ್ಮರಹಸ್ಯವನ್ನು ತಿಳಿಸುತ್ತಾನೆ. ಪಾಂಡವರ ಹಿರಿಯ ನೀನೇ.ನಿನ್ನನ್ನು ಹಸ್ತಿನಾಪುರದ ರಾಜನನ್ನಾಗಿ ಮಾಡುತ್ತೆನೆ ಎಂಬ ಅಮಿಷ ಒಡ್ಡುತ್ತಾನೆ ತನ್ನ ಜನ್ಮರಹಸ್ಯ ತಿಳಿದು ಕರ್ಣನು ಕುತ್ತಿಗೆಯ ನರಗಳು ಬಿಗಿದು, ಕಣ್ಣೀರು ಸುರಿಸುತ್ತಾನೆ, ಕೌರವನಿಗೆ ಕೇಡಾಗುತ್ತದೆ. ಕೃಷ್ಣನ ಹಗೆ ಹೊಗದೋದರೆ ಸುಡದೆ ಬಿಡುವುದಿಲ್ಲ ಎಂದು ಚಿಂತಿತನಾಗುತ್ತಾನೆ. ಕೆಲಕಾಲ ಸುಮ್ಮನಿದ್ದ ಕರ್ಣನನ್ನು ಕುರಿತು ಕೃಷ್ಣ ಹೀಗೆ ಹೇಳುತ್ತಾನೆ. ' ಪಾಂಡವರಿಂದ ಸೇವೆ ಮಾಡಿಸಿಕೊಳ್ಳಲು ಮನಸ್ಸಿಲ್ಲವೆ ? ನಾನು ನಿನಗೆ ಕೇಡು ಬಗೆಯುತ್ತಿಲ್ಲ' ಎಂದಾ, ಕರ್ಣನು " ಕೃಷ್ಣ ಈ ಭೂಮಿಗೆ ರಾಜ್ಯಕ್ಕೆ ಮನಸೋಲುವವನಲ್ಲ. ಕೌರವರಿಂದ. ಪಾಂಡವರಿಂದ ಸೇವೆ ಮಾಡಿಸಿಕೊಳ್ಳಲು ಇಷ್ಟವಿಲ್ಲ ನನ್ನನ್ನು ಕಾಪಾಡಿದ ಒಡೆಯನಿಗೆ ಶತ್ರುಗಳ ತಲೆಗಳನ್ನು ಕಡಿದು ಒಪ್ಪಿಸುವ ಅವಸರದಲ್ಲಿದ್ದೆ.ಅದಕ್ಕೂ ಮೊದಲೇ ಕೌರವನನ್ನು ಕೊಂದುಬಿಟ್ಟೆ ಯಾರು ಏನು ಹೇಳಿದರೂ ಕೌರವನೇ ನನಗೆ ಎಲ್ಲ, ನಾಳೆ ನಡೆಯುವ ಮಹಾಭಾರತ ಯುದ್ಧದಲ್ಲಿ ದುರ್ಯೋಧನನ ಋಣ ತೀರುವಂತೆ ಹೋರಾಡುತ್ತೇನೆ. ಅವನಿಗಾಗಿ ಶರೀರವನ್ನು ಅರ್ಪಿಸುತ್ತೇನೆ. ನಿನ್ನವರಾದ ಪಾಂಡವರನ್ನು ನೋಯಿಸುವುದಿಲ್ಲ ಎನ್ನುತ್ತಾನೆ. ಸ್ವಾಮಿನಿಷ್ಠೆಗೆ ಬದ್ಧನಾದ ಕರ್ಣ ಪ್ರಲೋಭನೆಗೆ ಬಲಿಯಾಗದೆ ಅಸಹಾಯಕನಾಗಿ, ಸಂಕಟದಿಂದ ಬಳಲುತ್ತಾನೆ. ಕರ್ಣನ ಹಿರಿಮೆ–ಗರಿಮೆ ವ್ಯಕ್ತವಾಗಿದೆ.

**ಉತ್ತರ :** ಜೀವನದಲ್ಲಿ ಪರಸ್ಪರ ಹೊಂದಣಿಕೆ ಮತ್ತು ಸಾಮರಸ್ಯದ ಬದುಕು ಅತ್ಯಗತ್ಯ. ಛಲ, ಮತ್ಸರ ಪ್ರಧಾನವಾದರೆ ಸಂಘರ್ಷ ಅನಿವಾರ್ಯವಾಗುತ್ತದೆ. ಶತ್ರುವಿನೊಡನೆ ಸಮರಕ್ಕಿಳಿದು ಕಾದಾಡುವ ಮುನ್ನ ಶತ್ರುಬಲದ ವಿವಿಧ ಆಯಾಮಗಳನ್ನು ಶಮನಗೊಳಿಸಿದಾಗ ಗೆಲವು ಸಾಧ್ಯ ಎಂಬುದು ರಾಜ–ತಂತ್ರ.ಕೌರವರೊಂದಿಗೆ ಸಂಧಿ ಮುರಿದು ಬಿದ್ದು ಯುದ್ಧವೇ ಸಿದ್ಧ ಎಂದು ತೀರ್ಮಾನವಾದಾಗ ಕೃಷ್ಣನು ಕರ್ಣನನ್ನು ಕರೆದು ಮೈದುನತನದ ಸರಸವನ್ನು ಎಸಗಿ ತನ್ನ ರಥದಲ್ಲಿ ತೊಡೆಗೆ ತೊಡೆತಾಗುವಂತೆ ಕೂರಿಸಿಕೊಂಡು ಕರ್ಣನ ಜನ್ಮದ ರಹಸ್ಯವನ್ನು ಹೇಳುತ್ತಾನೆ. ನಿಮ್ಮಲ್ಲಿ ಯಾದವರು ಕೌರವರು ಎಂಬ ಬೇಧವಿಲ್ಲ. ಈ ಭೂಮಿಗೆ ನಿಜವಾಗಿ ನೀನೇ ಒಡೆಯನಾಬೇಕು. ಕುಂತಿ ಪಡೆದ ಐದು ಮಂತ್ರಗಳಲ್ಲಿ ನೀನೆ ಮೊದಲಿಗ, ಎರಡನೆಯವನು ಯುಧಿಷ್ಠರ.ಮೂರೆಯವನು ಕಲಿಭೀಮ, ನಾಲ್ಕನೆಯವನು ಅರ್ಜುನ. ಕೊನೆಯ ಐದನೆಯ ಮಂತ್ರದಲ್ಲಿ ಮಾದ್ರಿಗೆ ನಕುಲ–ಸಹದೇವರು ಜನಿಸಿದರು ನಿನ್ನನ್ನು ಹಸ್ತಿನಾಪುರ ರಾಜನನ್ನಾಗಿ ಮಾಡುತ್ತೇನೆ. ಕೌರವರು, ಪಾಂಡವರು ನಿನ್ನ ಸೇವಕರಾಗಿರುತ್ತಾರೆ. ಇದನ್ನು ಬಿಟ್ಟು ದುರ್ಯೋಧನನ ಎಂಜಲಿಗೆ ಕೈಚಾಚವುದು ಸರಿಯೆ ?ಎಡಭಾಗದಲ್ಲಿ ಕೌರವರು. ಬಲಭಾಗದಲ್ಲಿ ಪಾಂಡವರು,ನಡುವಿನಲ್ಲಿ ಮಾದ್ರರು. ಮಾಗಧರು, ಯಾದವರು ಇರುತ್ತಾರೆ ಇವರ ನಡುವೆ ರಾಜನಾಗಿ ವಿಜ್ರಂಭಿಸುವುದನ್ನು ಬಿಟ್ಟು ದುರ್ಯೋಧನ ಕರೆದಾಗ ಸೇವಕನಂತೆ 'ಸ್ವಾಮಿ ನಿಮ್ಮ ಪ್ರಸಾದ' ಎನ್ನವುದು ಕಷ್ಟವಾಗುವುದಿಲ್ಲವೆ ?ಆದ್ದರಿಂದ ಪಾಂಡವರ ಪಕ್ಷವನ್ನು ಸೇರುವಂತೆ ಕೃಷ್ಣನು ಆಮಿಷಗಳನ್ನು ಒಡ್ಡುತ್ತಾನೆ.

**30) ಗದ್ಯಭಾಗವನ್ನು ಓದಿಕೊಂಡು, ಪ್ರಶ್ನೆಗಳಿಗೆ ಉತ್ತರಿಸುವುದು :**

ವಿಶ್ವದ ಬಹುಭಾಷಾ ಪ್ರಪಂಚದಲ್ಲಿ ಸುಮಾರು ನಾಲ್ಕು ಸಾವಿರ ಭಾಷೆಗಳಿಗೆ ಭಾಷೆಗಳನ್ನು ವ್ಯಾವಹಾರಿಕ ಮತ್ತು ಗ್ರಾಂಥಿಕ ಭಾಷೆ ಎಂದು ವಿಂಗಡಿಸಲಾಗಿದೆ.ವ್ಯಾವಹಾರಿಕ ಎಂದರೆ ಜೀವದ ಭಾಷೆ ಇದರಲ್ಲಿ ಜನರು ಮಾತನಾಡುತ್ತಾರೆ, ವ್ಯವಹರಿಸುತ್ತಾರೆ. ಉದಾಹರಣೆ . ಕನ್ನಡ,ತುಳು.ಕೊಂಕಣಿ, ಉರ್ದು ಇತ್ಯಾದಿ. ಅಭಿವೃದ್ಧ ಹೊಂದಿ ಗ್ರಂಥ ರಚನೆಯಲ್ಲಿ ಬಳಸುವ ಭಾಷೆಯೇ ಗ್ರಾಂಥಿಕ ಭಾಷೆ. ಉದಹಾರಣೆ ಸಂಸ್ಕೃತ , ಇಂಗ್ಲಿಷ್ ,ಹಿಂದಿ ಇತ್ಯಾದಿ ಎಲ್ಲಾ ಗ್ರಾಂಥಿಕ ಭಾಷೆಗಳು ವ್ಯಾವಹರಿಕವಾಗಬೇಕಿಲ್ಲ ಹಾಗೆಯೇ ಎಲ್ಲಾ ವ್ಯಾಹರಿಕ ಭಾಷೆಗಳು ಗ್ರಾಂಥಿಕವಾಗಬೇಕೆಂಬ ನಿಯಮವಿಲ್ಲ.ತುಳು ಒಂದು ಸುಂದರ ವ್ಯಾಹರಿಕ ಭಾಷೆ ಆದರೆ ಗ್ರಾಂಥಕ ಭಾಷೆಯಲ್ಲ. ದೇವಭಾಷೆ ಎನಿಸಿರುವ ಸಂಸ್ಕೃತ ಗ್ರಾಂಥಿಕ ಭಾಷೆಯಾಗಿದೆ ಆದರೆ ಯಾವ ಪ್ರದೇಶದಲ್ಲಿಯೂ ವ್ಯಾಹರಿಕವಾಗಿಲ್ಲ ನವಶಿಲಾಯುಗದ ಮಾನವ ತನ್ನ ಸಂಚಾರಿ ಜೀವನವನ್ನು ಹೊಂದಲು ಪ್ರಾರಂಭಿಸಿದಂದಿನಿಂದ ಆತನಿಗೆ ಲೆಕ್ಕವಿಡುವ ಅವಶ್ಯಕತೆ ಉಂಟಾಯಿತು. ಓದು ಬರಹ ಬಾರದೆ ಇದ್ದರೂ ತಾನು ಕೆಲಸಕ್ಕೆ ಹೋದ ದಿನಗಳನ್ನು ದಿನನಿತ್ಯ ಗೋಡೆಯ ಮೇಲೆ. ಒಂದೊಂದು ಗೆರೆ ಎಳೆದು ಗುರುತಿಸಿ ಕೊನೆಯಲ್ಲಿ ಲೆಕ್ಕಹಾಕಿ ಸಂಬಳ ಪಡೆಯುತ್ತಾನೆ. ಇದನ್ನು ಲಿಪಿಯ ಉಗ್ರಮ ಕಾಲ ಎನ್ನುವರು.

**ಪ್ರಶ್ನೆಗಳು: ಅ) ವ್ಯಾವಹರಿಕ ಮತ್ತು ಗ್ರಾಂಥಿಕ ಭಾಷೆಗಳಿಗಿರುವ ವ್ಯತ್ಯಾಸಗಳೇನು ?**

**ಉತ್ತರ:** ವ್ಯಾವಹಾರಿಕ ಎಂದರೆ ಜೀವದ ಭಾಷೆ ಇದರಲ್ಲಿ ಜನರು ಮಾತನಾಡುತ್ತಾರೆ, ವ್ಯವಹರಿಸುತ್ತಾರೆ. ಉದಾಹರಣೆ ಕನ್ನಡ,ತುಳು,ಇತ್ಯಾದಿ.ಗ್ರಾಂಥಿಕ ಭಾಷೆ ಎಂದರೆ ಅಭಿವೃದ್ಧಿ ಹೊಂದಿ ಗ್ರಂಥರಚನೆಯಲ್ಲಿ ಬಳಸುವ ' ಭಾಷೆ ಉದಾರಣೆ ಸಂಸ್ಕೃತ' ಹಿಂದಿ ಇಂಗ್ಲಿಷ್ , ಇತ್ಯಾದಿ ಎಲ್ಲಾ ವ್ಯಾವಹರಿಕ ಭಾಷೆಘಳು ಗ್ರಾಂಥಿಕವಾಗಭೇಕಿಲ್ಲ. ಎಲ್ಲಾ ಗ್ರಾಂಥಿಕ ಭಾಷೆಗಳು ವ್ಯಾಹರಿಕವಾಗಬೇಕಿಲ್ಲ ತುಳು ಸುಂದರ ವ್ಯಾವಹರಿಕ ಭಾಷೆ ಆದರೆ ಗ್ರಾಂಥಿಕವಲ್ಲ. ಸಂಸ್ಕೃ ಗ್ರಾಂಥಿಕ ಭಾಷೆ.ಯಾವ ಪ್ರದೇಶದಲ್ಲಿಯೂ ವ್ಯಾವಹರಿಕವಾಗಿಲ್ಲ

**ಆ) ಲಿಪಿಯ ಉಗಮ ಹೇಗಾಯಿತು ?**

**ಉತ್ತರ :** ನವಶಿಲಾಯುಗದ ಮಾನವ ತನ್ನ ಸಂಚಾರಿ ಜೀವನವನ್ನು ತ್ಯಜಿಸಿ. ಒಂದೆಡೆ ಬೀಡುಬಿಟ್ಟು ಆಸ್ತಿ ಮನೆ. ಬದುಕು ಮೊದಲಾದ ಭಾವನೆಯನ್ನು ಹೊಂದಲು ಪ್ರಾರಂಭಿಸಿದ.ಅಂದಿನಿಂದ ಆತನಿಗೆ ಲೆಕ್ಕವಿಡುವ ಅವಶ್ಯಕತೆ ಉಂಟಾಯಿತು.ಓದು ಬರೆ ಬಾರದೆ ಇದ್ದರೂ ಕೆಲಸಕ್ಕೆ ಹೋದ ದಿನಗಳ ಲೆಕ್ಕವನ್ನು ಗೋಡೆಯ ಮೇಲೆ ಗೆರೆ ಎಳೆದು ಗುರುತಿಸಿ ಕೊನೆಯಲ್ಲಿ ಎಣಿಸಿ ಲೆಕ್ಕಹಾಕಿ ಸಂಬಳ ಪಡೆಯುತ್ತಿದ್ದ ಹೀಗೆ ಲಿಪಿಯ ಉಗಮವಾಯಿತು.

## ವಿಭಾಗ–'ಬಿ' (ಅನ್ವಯಿಕ ವ್ಯಾಕರಣ, ಅಲಂಕಾರ,ಛಂದಸ್ಸು)

**VII. ಕೆಳಗಿನ ಪ್ರಶ್ನೆಗಳಿಗೆ ಆಥವಾ ಅಪೂರ್ಣ ಹೇಳಿಕೆಗಳಿಗೆ ನಾಲ್ಕು ಆಯ್ಕೆಗಳನ್ನು ನೀಡಲಾಗಿದೆ.ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಕ್ರಮಾಕ್ಷರದೊಂದಿಗೆ ಬರೆಯಿರಿ. 10X1=10**

**31. ಗುಣಸಂಧಿಗೆ ಉದಾಹರಣೆಯಾಗಿರುವ ಪದ**

(ಎ) ಗಿರೀಶ (ಬಿ) ಮಹರ್ಷಿ

(ಸಿ) ಮೈದೋರು (ಡಿ) ಷಣ್ಮುಖ

**ಉತ್ತರ :** (ಬಿ) ಮಹರ್ಷಿ

**32. ಒಂದು ಪದವನ್ನೋ ವಾಕ್ಯವನ್ನೋ ಅದಕ್ಕೆ ಸಮನಾರ್ಥಕ ವಾಕ್ಯವನ್ನೋ ಹೇಳುವಾಗ ಈ ಚಿಹ್ನೆಯನ್ನು ಬಳಸಲಾಗುತ್ತದೆ.**

(ಎ) ವಾಕ್ಯವೇಷ್ಟನ (ಬಿ) ಉದ್ಧರಣ

(ಸಿ) ಆವರಣ (ಡಿ) ಭಾವಸೂಚಕ

**ಉತ್ತರ :** (ಸಿ) ಆವರಣ

**33. ಒಂದು ಅಥವಾ ಅನೇಕ ವಾಕ್ಯಗಳನ್ನು ಒಂದು ಪ್ರಧಾನ ವಾಕ್ಯಕ್ಕೆ ಅಧೀನವಾಗಿರುವ ವಾಕ್ಯ ಇದು**

(ಎ) ಸಂಯೋಜಿತ ವಾಕ್ಯ (ಬಿ) ಸಾಮಾನ್ಯ ವಾಕ್ಯ

(ಸಿ) ಪ್ರಶ್ನಾರ್ಥಕ ವಾಕ್ಯ (ಡಿ) ಮಿಶ್ರ ವಾಕ್ಯ

**ಉತ್ತರ :** ಮಿಶ್ರ ವಾಕ್ಯ

**34. "ಚಂದ್ರನಂತೆ" ಪದವು ವ್ಯಾಕರಣಾಂಶದ ಈ ಗುಂಪಿಗೆ ಸೇರಿದೆ**

(ಎ) ತದ್ಧಿತಾಂತಾವ್ಯಯ (ಬಿ) ಕೃದಂತಾವ್ಯಯ

(ಸಿ) ತದ್ಧಿತಾಂತಭಾವನಾಮ (ಡಿ)ಕೃದಂತ ಭಾವನಾಮ

**ಉತ್ತರ :** (ಎ) ತದ್ಧಿತಾಂತಾವ್ಯಯ

**35. 'ರಾಹುಲ' ಪದವು ನಾಮಪದದ ಈ ಗುಂಪಿಗೆ ಸೇರಿದೆ**

(ಎ) ರೂಢನಾಮ (ಬಿ) ಅನ್ವರ್ಥ ನಾಮ

(ಸಿ) ಅಂಕಿತನಾಮ (ಡಿ) ಭಾವನಾಮ

**ಉತ್ತರ :** (ಸಿ) ಅಂಕಿತನಾಮ

**36. ಕೃದಂತಾಭಾವನಾಮಕ್ಕೆ ಉದಹರಣೆಯಾಗಿರುವ ಪದ**

(ಎ) ಮಾಡಿದ (ಬಿ) ಮಾಟ

(ಸಿ) ಮಾಡಲು (ಡಿ) ಮಾಡಲು

**ಉತ್ತರ :** (ಬಿ) ಮಾಟ

**37. ಚತುರ್ಥೀವಿಭಕ್ತಿ ಪ್ರತ್ಯಯದ ಕಾರಕಾರ್ಥ**

(ಎ) ಸಂಪ್ರದಾನ (ಬಿ) ಸಂಬಮಧ

(ಸಿ) ಅಪದಾನ (ಡಿ) ಅಧಿಕರಣ

**ಉತ್ತರ :** (ಎ) ಸಂಪ್ರದಾನ

**38. ಕ್ರಿಯಾರ್ಥಕಾವ್ಯಯಕ್ಕೆ ಉದಾಹರಣೆಯಾಗಿರುವ ಪದ**

(ಎ) ನೀನೇ (ಬಿ) ಆದ್ದರಿಂದ

(ಸಿ) ಚೆನ್ನಾಗಿ (ಡಿ) ಸಾಕು

**ಉತ್ತರ :** (ಡಿ) ಸಾಕು

**39. 'ವ್ಯಾಪಾರಿ' ಪದದ ತದ್ಭವ ರೂಪ**

(ಎ) ಬಿಕಾರಿ (ಬಿ) ಬೀಮಾರಿ

(ಸಿ) ಬೇಹಾರಿ (ಡಿ) ಬಿಹಾರಿ

**ಉತ್ತರ :** (ಸಿ) ಬೇಹಾರಿ

**40 'ಮಾಡಳು' ಪದವು ಈ ಕ್ರಿಯಾರೂಪಕ್ಕೆ ಸೇರಿದೆ**

(ಎ) ವಿಧ್ಯರ್ಥಕ (ಬಿ)ಸಂಭಾವನಾತರ್ಥಕ

(ಸಿ)ನಿಷೇಧಾರ್ಥಕ (ಡಿ)ಪ್ರಶ್ನಾರ್ಥಕ

**ಉತ್ತರ :** (ಸಿ) ನಿಷೇಧಾರ್ಥಕ

**VIII. ಕೆಳಗಿನವುಗಳಲ್ಲಿ ಮೊದಲೆರೆಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸರಿಹೊಂದುವ ಸಂಬಂಧೀ ಪದವನ್ನು** ಬರೆಯಿರಿ. **4X1=4**

**41. ಇನಾಮು : ಅರಬ್ಬೀ :: ಸಲಾಮು : .........................**

**ಉತ್ತರ :** ಹಿಂದೂಸ್ಥಾನಿ

**42. ಹೊಗೆದೋರು : ಕ್ರಿಯಾಸಮಾಸ :: ಚಕ್ರಪಾಣಿ : .........................**

**ಉತ್ತರ :** ಬಹುವ್ರೀಹಿ ಸಮಾಸ

**43. ಕದಳಿ : ಬಾಳೆ :: ವಾಜಿ : .........................**

**ಉತ್ತರ :** ಕುದುರೆ

**44. ಹಾಲ್ಜೇನು : ಜೋಡುನುಡಿ :: ಬಟ್ಟಬಯಲು : .........................**

**ಉತ್ತರ :** ದ್ವಿರುಕ್ತಿ

**IX. ಈ ಕೆಳಗಿನ ಪದ್ಯ ಭಾಗಕ್ಕೆ ಪ್ರಸ್ತಾರ ಹಾಕಿ. ಗಣ ವಿಭಾಗಿಸಿ, ಛಂದಸ್ಸನ್ನು ಹೆಸರಿಸಿ 1X3=3**

**45. ಕಾದದಿರೆನಜ್ಜ ಪಾಂಡವ ರಾದರ್ ಮೇಣೆಂದಿನೊಂದೆ ಸಮರದೊಳಾಂಮೇ**

ಅಥವಾ

| | | | |
|---|---|---|---|
| 4 | 4 | 4 | |
| -UU | U-U | - UU | |
| ಕಾದದಿ | ರೆನಜ್ಜ | ಪಾಂಡವ | = 12 |

| | | | | |
|---|---|---|---|---|
| _ _ | _ _ | U _ U | UUU U | – – = 20 |
| ರಾದರ್ | ಮೇಣೆಂ | ದಿನೊಂದೆ | ಸಮರದೊ | ಳಾಂಮೇ |

ಇದು ಮಾತ್ರಾಗಣ ಛಂದಸ್ಸಿನ ಚಂಪಕಮಾಲಾ ವೃತ್ತದ ಲಕ್ಷ್ಯವಾಗಿದೆ.

| | | | | | | |
|---|---|---|---|---|---|---|
| ನ | ಜ | ಬಿ | ಜ | ಜ | ರ | ರ |
| UUU | U _ U | _ UU | U _ U | U_U | U _ U | _ U_ |
| ಒಡವೆ | ಯನರ್ಥಿ | ಗಿತ್ತೆನ | ವನೀತ | ಳಮಂಗು | ರುಗಿತ್ತೆ | ನೀಗಳೊಂ |

ಇದು ಅಕ್ಷರ ಗಣ ಛಂದಸ್ಸಿನ ಚಂಪಕಮಾಲಾ ವೃತ್ತದ ಲಕ್ಷ್ಯವಾಗಿದೆ.

**X. ಕೆಳಗಿನ ವಾಕ್ಯದಲ್ಲಿರು ಅಲಂಕಾರವನ್ನು ಹೆಸರಿಸಿ, ಲಕ್ಷಣ ಬರೆದು, ಸಮನ್ವಯ ಗೊಳಿಸಿ : 1X3=3**

**46 "ಮಾತು ಬಲ್ಲವನಿಗೆ ಜಗಳವಿಲ್ಲ : ಊಟ ಬಲ್ಲವನಿಗೆ ರೋಗವಿಲ್ಲ"**

**ಉತ್ತರ :** ಅಲಂಕಾರದ ಹೆಸರು : ದೃಷ್ಟಾಂತಾಲಂಕಾರ

**ಲಕ್ಷಣ :** ಎರಡು ಬೇರೆ ಬೇರೆ ವಾಕ್ಯ ಅರ್ಥ ಸಾದೃಶ್ಯದಿಂದ ಬಿಂಬ-ಪ್ರತಿಬಿಂಬಭಾವವು ತೋರಿ ಬಂದರೆ ಅದು ದೃಷ್ಟಾಂತಾಲಂಕಾರ

**ಸಮನ್ವಯ :** ಉಪಮೇಯ : ಮಾತು ಬಲ್ಲವನಿಗೆ ಜಗಳವಿಲ್ಲ (ಪ್ರತಿಬಿಂಬ)

**ಉಪಮಾನ :** ಊಟ ಬಲ್ಲವನಿಗೆ ರೋಗವಿಲ್ಲ ( ಬಿಂಬ)

ಇಲ್ಲಿ 'ಊಟ ಬಲ್ಲವನಿಗೆ ರೋಗವಿಲ್ಲ' ಎಂಬ ಉಪಮಾನ ವಾಕ್ಯಕ್ಕೂ **'ಮಾತುಬಲ್ಲವನಿಗೆ ಜಗಳವಿಲ್ಲ'** ಎಂಬ ಉಪಮೇಯ ವಾಕ್ಯಕ್ಕೂ ಅರ್ಥ ಸಾದೃಶ್ಯದಿಂದ ಪರಸ್ಪರ ಬಿಂಬ ಪ್ರತಿಬಿಂಬ ಭಾವವು ಕಂಡುಬರುತ್ತಿರುವುದರಿಂದ ಈ ಮೇಲಿನ ಲಕ್ಷ್ಯವು ದೃಷ್ಟಾಂತ ಅಲಂಕಾರದ್ದಾಗಿದೆ.

ಅಥವಾ

ಸಿಡಿಲ ಸಿಡಿದ್ಹಾಂಗ ಗುಂಡು ಸುರಿದಾವ.

ಅಲಂಕಾರದ ಹೆಸರು : ಉಪಮಾಲಂಕಾರ

ಲಕ್ಷಣ : ಎರಡು ವಸ್ತುಗಳಿಗೆ ಇರುವ ಪರಸ್ಪರ ಹೋಲಿಕೆಯನ್ನು ಹೇಳುವುದೇ ಉಪಮಾಲಂಕಾರ

**ಸಮನ್ವಯ** : ಉಪಮೇಯ : ಗುಂಡು ಸುರಿಯುವುದು ( ಗುಂಡು ಹಾರಿಸುವುದು)

**ಉಪಮಾನ** : ಸಿಡಿಲು ಸಿಡಿಯುವುದು

**ವಾಚಕ ಪದ** : ಹಾಂಗ(ಅಂತೆ)

**ಸಮಾನಧರ್ಮ** : (ಲುಪ್ತವಾಗಿದೆ) ತೀವ್ರತೆ

ಇಲ್ಲಿ ಉಪಮೇಯವಾದ ಗುಂಡು ಹಾರಿಸುವುದನ್ನು ಉಪಮಾನವಾದ ಸಿಡಿಲು ಸಿಡಿಯುವುದಕ್ಕೆ ಹೋಲಿಸಲಾಗಿದೆ **'ಹಾಂಗ'** ಎಂಬ ವಾಚಕ ಪದವಿದ್ದು ತೀವ್ರತೆ ಲುಪ್ತ ವಾಗಿರುವುದರಿಂದ ಧರ್ಮಲುಪ್ತೋಪಮಾಲಂಕಾರ (ಉಪಮಾಲಂಕಾರ)ದ ಲಕ್ಷ್ಯವಾಗಿದೆ.

**ವಿಭಾಗ – ಸಿ**

**XI. ಗಾದೆಯನ್ನು ವಿಸ್ತರಿಸಿ ಬರೆಯಿರಿ (ವಿಷಯ ಶಿಕ್ಷಕರಿಂದ ತಿಳಿಯುವುದು )**

47) * ಕೂಡಿ ಬಾಳಿದರೆ ಸ್ವರ್ಗ ಸುಖ

*ಮಾಡಿದ್ದುಣ್ಣೋ ಮಹಾರಾಯ.

* ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ. (ವಿಷಯ ಶಿಕ್ಷಕ–ರಿಂದ ತಿಳಿಯುವುದು )

**48) ಪತ್ರ ಲೇಖನ ಬರೆಯುವುದು ( ವಿಷಯವನ್ನು ತರಗತಿ ಶಿಕ್ಷಕರಿಂದ ತಿಳಿಯುವುದು )**

ನಿಮ್ಮನ್ನು ವಿಜಯಪುರದ ವಿವೇಕಾನಂದ ಪ್ರೌಢಶಾಲೆ ' ಹರ್ಷಿಣಿ ' ಎಂದು ಭಾವಿಸಿಕೊಂಡು, ನಿಮ್ಮ ಶಾಲೆಯಲ್ಲಿ ಆಚರಿಸಿದ ' ಗಣರಾಜ್ಯೋತ್ಸವ ಆಚರಣೆ 'ಯ ವರದಿಯನ್ನು ಪ್ರಕಟಿಸುವಂತೆ ಕೋರಿ ' ಹೊಸ ದಿಗಂತ ' ದಿನಪತ್ರಿಕೆಯ ಸಂಪಾದಕರಿಗೊಂದು ಮನವಿ ಪತ್ರ ಬರೆಯಿರಿ.

ಅಥವಾ

ನಿಮ್ಮನ್ನು ಹಾಸನದ ಸರ್ಕಾರಿ ಪ್ರೌಢಶಾಲೆಯ 'ಅಶೋಕ ' ಎಂದು ಭಾವಿಸಿಕೊಂಡು, ನಿಮ್ಮ ಶಾಲೆಯಲ್ಲಿ ನಡೆದ ವಾರ್ಷಿಕೋತ್ಸವ ಸಮಾರಂಭದ ವಿವರವನ್ನು ತಿಳಿಸಿ, ಮೈಸೂರಿನಲ್ಲಿರುವ 'ಜಯಲಕ್ಷ್ಮಿ' ಎಂಬ ಹೆಸರಿನ ತಾಯಿಯವರಿಗೊಂದು ಪತ್ರಬರೆಯಿರಿ.

**XII. ಪ್ರಬಂಧ ಬರೆವಣಿಗೆ : (ವಿಷಯಶಿಕ್ಷಕರಿಂದ ತಿಳಿಯುವುದು)**

49) *ತ್ಯಾಜ್ಯವಸ್ತುಗಳ ನಿರ್ವಹಣೆ

*ವಿದ್ಯಾರ್ಥಿಗಳ ಜ್ಞಾನಾಭಿವೃದ್ಧಿಯಲ್ಲಿ ಸಾಮಾಜಿಕ ಜಾಲತಾಣಗಳ ಸದ್ಬಳಕೆ

*ಕರ್ನಾಟಕದ ನದಿ ನೀರಿನ ಸಮಸ್ಯೆಗಳು

## ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಹೊಸಕೋಟೆ ತಾಲ್ಲೂಕು. ಬೆಂಗಳೂರು ಗ್ರಾಮಾಂತರ ಜಿಲ್ಲೆ

**ಪ್ರಶ್ನೋತ್ತರ ಪತ್ರಿಕೆ ಸಂಗ್ರಹ – 02**

**ಪ್ರಥಮ ಭಾಷೆ– ಕನ್ನಡ** **ಸಮಯ : 3 ಗಂಟೆ 15 ನಿಮಿಷ**

**10ನೇ ತರಗತಿ** **ಒಟ್ಟು ಅಂಕಗಳು : 100**

### ವಿಭಾಗ – 'ಎ' (ಪಠ್ಯಗಳ ಅಧ್ಯಯನ – ಗದ್ಯ, ಪದ್ಯ, ಪಠ್ಯಪೂರಕ ಅಧ್ಯಯನ)

**ಈ ಕೆಳಗಿನ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ.** **9X1=9**

1. **ಮತಂಗಾಶ್ರಮದಲ್ಲಿ ವಾಸವಿದ್ದ ತಪಸ್ವಿನಿ ಯಾರು?**

**ಉತ್ತರ :** ಮತಂಗಾಶ್ರಮದಲ್ಲಿ ವಾಸವಿದ್ದ ತಪಸ್ವಿನಿ ಶಬರಿ.

2. ಲಂಡನ್ನಿನಲ್ಲಿ ನೆಲ್ಸನ್ ರವರ ಮೂರ್ತಿಯಿರುವ ಸ್ಥಳದ ಹೆಸರೇನು?

**ಉತ್ತರ :** ಲಂಡನ್ನಿನಲ್ಲಿ ನೆಲ್ಸನ್ ರವರ ಮೂರ್ತಿಯಿರುವ ಸ್ಥಳದ ಹೆಸರು "ಟ್ರಾಫಲ್ಗಾರ್ ಸ್ಕ್ವೇರ್".

3. **ಯುದ್ಧದ ಬಗೆಗೆ ಮುದುಕಿಯ ಅಭಿಪ್ರಾಯವೇನು?**

**ಉತ್ತರ :** "ಎಲ್ಲರಿಗೂ ದೇಹಕ್ಕೂ ಮನಸ್ಸಿಗೂ ಗಾಯ ಮಾಡುವುದೇ ಯುದ್ಧದ ಪರಿ ತಾನೇ?" ಎಂಬುದು ಯುದ್ಧದ ಬಗೆಗೆ ಮುದುಕಿಯ ಅಭಿಪ್ರಾಯ.

4. **ಸುಕುಮಾರಸ್ವಾಮಿಗೆ ಯಾವ ಪಟ್ಟವನ್ನು ಕಟ್ಟಲಾಯಿತು?**

**ಉತ್ತರ :** ಸುಕುಮಾರಸ್ವಾಮಿಗೆ ಸೆಟ್ಟಿಯ ಪಟ್ಟವನ್ನು ಕಟ್ಟಲಾಯಿತು.

5. **ಅಶ್ವಿನಿ ದೇವತೆಗಳ ವರಬಲದಿಂದ ಜನಿಸಿದವರು ಯಾರು?**

**ಉತ್ತರ :** ಅಶ್ವಿನಿ ದೇವತೆಗಳ ವರಬಲದಿಂದ ಜನಿಸಿದವರು ನಕುಲ ಮತ್ತು ಸಹದೇವ.

6. **ಆಶ್ವಯುಜದ ಬತ್ತದ ಗದ್ದೆಯ ಬಣ್ಣ ಯಾವ ಹಸುರಿನಂತಿದೆ?**

**ಉತ್ತರ :** ಆಶ್ವಯುಜದ ಬತ್ತದ ಗದ್ದೆಯ ಬಣ್ಣ ಗಿಳಿಯೆದೆ ಹಸುರಿನಂತಿದೆ.

7. **ದ್ರೋಣನು ಯಾರೊಡನೆ ಪರಶುರಾಮನ ಬಳಿಗೆ ಬಂದನು.**

**ಉತ್ತರ :** ದ್ರೋಣನು ಅಶ್ವತ್ಥಾಮನೊಡನೆ ಪರಶುರಾಮನ ಬಳಿಗೆ ಬಂದನು.

8. **ಜಲಿಯನ್ ವಾಲಾಬಾಗ್ ನಲ್ಲಿ ಶಾಂತಿಯುತ ಸಭೆ ಯಾವಾಗ ನಡೆಯಿತು?**

**ಉತ್ತರ :** ಜಲಿಯನ್ ವಾಲಾಬಾಗ್ ನಲ್ಲಿ ಶಾಂತಿಯುತ ಸಭೆ ಏಪ್ರಿಲ್ 13 .1919 ರಲ್ಲಿ ನಡೆಯಿತು.

9. **ಪುಟ್ಟ ಪೋರಿಯ ಅಮ್ಮ ಎಲ್ಲಿ ಮಗಿದ್ದಾಳೆ?**

**ಉತ್ತರ :** ಪುಟ್ಟ ಪೋರಿಯ ಅಮ್ಮ ಗುಡಿಸಲಿನಲ್ಲಿ ಮಗಿದ್ದಾಳೆ.

**ಈ ಕೆಳಗಿನ ಪ್ರಶ್ನೆಗಳಿಗೆ ಮೂರು–ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ. (ಉತ್ತರದ ಅಂಶಗಳನ್ನಾಧರಿಸಿ ಪ್ರತಿ ಪ್ರಶ್ನೆಗೂ ಎರಡು ಅಂಕಗಳು)** **10X2=20**

10. **ವೂಲವರ್ಥ ಅಂಗಡಿಯಲ್ಲಿ ಸಿಗುವ ವಸ್ತುಗಳಾವುವು?**

**ಉತ್ತರ :** ಲಂಡನ್ ಪಟ್ಟಣದ ಪೇಟೆ ಬೀದಿಯಲ್ಲಿರುವ 'ವೂಲವರ್ಥ' ಎಂಬ ಸ್ಟೇಷನರಿ ಅಂಗಡಿಯಲ್ಲಿ ಎಲ್ಲಾ ತರದ ಸಾಮಾನುಗಳನ್ನು ಒಂದು ಪೆನ್ನಿಯಿಂದ ಆರು ಪೆನ್ನಿಯವರೆಗೆ ಮಾರುತ್ತಾರೆ ಪ್ರಾಚೀನ ಮಹಾಕಾವ್ಯದಂತೆ ಇದೊಂದು ಮಹಾಕೋಶವಾಗಿದೆ ಬೂಟು, ಕಾಲಿಚೀಲ, ಚಣ್ಣ. ಸಾಬೂನು, ಔಷಧ. ಅಡಿಗೆಯ ಪಾತ್ರೆ, ಇಲೆಕ್ಟ್ರಿಕ್ ದೀಪದ ಸಾಮಾನು, ಫೋಟೋ, ಅಡವಿಯ ಹೂವು ಯುದ್ಧ ಸಾಮಗ್ರಿ ಹೀಗೆ ಎಲ್ಲವೂ ಇಲ್ಲಿ ದೊರೆಯುತ್ತವೆ.

11, **ಲಂಡನ್ನಿನ ಹೆಣ್ಣು ಮಕ್ಕಳು ಯಾವ ಯಾವ ಕೆಲಸದಲ್ಲಿ ನಿಯುಕ್ತರಾಗಿರುತ್ತಾರೆ? (4ನೇ ಪ್ರಶ್ನೋತ್ತರ ಪತ್ರಿಕೆಯಲ್ಲಿ ಬಂದಿರುವ ಪ್ರಶ್ನೆ)**

12. **ಸುಕುಮಾರಸ್ವಾಮಿಯು ಹೇಗೆ ಸುಖಭೋಗಗಳನ್ನು ಅನುಭವಿಸುತ್ತಿದ್ದನು?**

**ಉತ್ತರ :** ಸುಕುಮಾರಸ್ವಾಮಿಯು ಅತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿಯಿಂದ ಕೂಡಿದ ಯುವಕನಾಗಿದ್ದನು. ಅವನಿಗೆ ಮೂವತ್ತೆರಡು ಲತಾಗೃಹಗಳಲ್ಲಿ ಅತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿ ಹಾವಭಾವ ವಿಲಾಸ ಸೌಂದರ್ಯಗಳಿಗೆ ಒಡತಿಯರಾದ ದೇವಲೋಕದ ಅಪ್ಸರೆಯರನ್ನು ಹೋಲುವಂತಹ ಮೂವತ್ತೆರಡು ಜನ ದಿವ್ಯರಾದ ಹೆಂಡತಿಯರು ಇದ್ದರು. ಅವನ ಬಳಿ ಮೂವತ್ತೆರಡು ನೃತ್ಯಾಂಗನೆಯರು ನಾಟ್ಯವನ್ನು ಮಾಡುತ್ತಿದ್ದರು.ಅವನ ಬಳಿ ಮೂವತ್ತೆರಡು ಕೋಟಿ ಚಿನ್ನ, ಪಂಚರತ್ನಗಳು ಇದ್ದವು,ಇವುಗಳಿಂದ ಸುಕುಮಾರಸ್ವಾಮಿಯು ಸುಖಭೋಗಗಳನ್ನು ಅನುಭವಿಸುತ್ತಿದ್ದನು.

13. **ವೃಷಭಾಂಕನು ಸುಕುಮಾರಸ್ವಾಮಿಗೆ ವ್ಯಾಧಿಯಿದೆ ಎಂದುಕೊಳ್ಳಲು ಕಾರಣವೇನು?**

**ಉತ್ತರ :** ಅರಸ ವೃಷಭಾಂಕ ಸುಕುಮಾರಸ್ವಾಮಿಯನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಬಂಧುಗಳು, ಪರಿವಾರದವರು ಶುಭಕರವಾದ ಬಿಳಿಸಾಸಿವೆಯ ಅಕ್ಷತೆಯನ್ನು ಹಾಕಿದಾಗ ಸುಕುಮಾರಸ್ವಾಮಿಗೆ ಒತ್ತಿದಂತಾಗಿ ಸೊಂಟವನ್ನು ಅಲುಗಾಡಿಸುತ್ತಾನೆ. ದೀಪವನ್ನು ನೋಡಿದಾಗ ಕಣ್ಣೀರು ಸುರಿಸುತ್ತಾನೆ.ಊಟ ಮಾಡುವಾಗ ಅರ್ಧ ಆಹಾರವನ್ನು ನುಂಗಿ ಅರ್ಧ ಆಹಾರವನ್ನು ಉಗುಳುವುದನ್ನು ಕಂಡು ಆಹಾರದ ಮೇಲಿನ ಅರುಚಿಯಿಂದ ಹೀಗೆ ಮಾಡುತ್ತಿದ್ದಾನೆ.ಈತನಿಗೆ ಏನೋ ವ್ಯಾಧಿಯಿರಬಹುದೆಂದು ಅರಸ ಭಾವಿಸುತ್ತಾನೆ.

14. **ಕವಿ ಕುವೆಂಪು ಅವರಿಗೆ ಆಗಸದಿಂದ ಸಂಜೆಯ ಬಿಸಿಲವರೆಗೂ ಎಲ್ಲೆಲ್ಲಿ ಹಸುರು ಕಂಡುಬಂದಿದೆ?**

**ಉತ್ತರ :** ಆಶ್ವಯುಜ ಮಾಸದ ನವರಾತ್ರಿಯಲ್ಲಿ ಪ್ರಕೃತಿಯಲ್ಲಿ ಹೆಪ್ಪುಗಟ್ಟಿದ ಹಚ್ಚಹಸುರಿನೊಂದಿಗೆ ಆಗಸವು ಸಹ ಹಸುರಿನಿಂದ ಕೂಡಿದಂತೆ ಕಾಣುತ್ತದೆ. ಹಾಗೆ ಮುಗಿಲುಗಳು ಸಹ ಹಸುರಿನಿಂದ ಕೂಡಿದೆ. ಗದ್ದೆಯ ಬಯಲು ಹಸುರಿನಿಂದ ಕಂಗೊಳಿಸುತ್ತಿದೆ. ಮಲೆಗಳು,ಕಣಿವೆಗಳು ಸಸ್ಯ ಸಮೃದ್ಧಿಯು ಹಸುರಿನಿಂದ

ಕೂಡಿವೆ. ಇಡೀ ಪ್ರಕೃತಿಯೇ ಹಸುರಾಗಿರುವುದರಿಂದ ಸಂಜೆಯ ಬಿಸಿಲೂ ಕೂಡ ಹಚ್ಚಹಸುರನ್ನೇ ಮೈಗೂಡಿಸಿಕೊಂಡಿದೆ. ಹೀಗೆ ಕವಿ ಕುವೆಂಪು ಅವರಿಗೆ ಆಗಸದಿಂದ ಸಂಜೆಯ ಬಿಸಿಲವರೆಗೂ ಹಸುರು ಕಂಡುಬಂದಿದೆ.

**15. ದ್ರೋಣನು ಶಪಥ ಮಾಡುವಾಗ ಹೇಳಿದ ಮಾತುಗಳಾವುವು?**

**ಉತ್ತರ :** ದ್ರೋಣನು ಶಪಥ ಮಾಡುತ್ತಾ,'ಎಲೈ, ಖಳನೇ ನೊಣಕ್ಕೆ ತಿಪ್ಪೆಯೇ ಶ್ರೇಷ್ಠವಾದದ್ದು ಎಂಬ ಗಾದೆ ಮಾತಿನಂತೆ ನಿನ್ನ ಯೋಗ್ಯತೆ ನನ್ನವರೆಗೂ ಉಂಟೆ. ನಾನು, ನೀನು ಒಂದೇ ಗುರುವಿನ ಬಳಿ ವಿದ್ಯಾಭ್ಯಾಸ ಮಾಡಿದ್ದೇವೆಂಬ ಕಾರಣದಿಂದ ನಿನ್ನನ್ನು ಕೊಲ್ಲದೇ ಬಿಡುತ್ತಿದ್ದೇನೆ. ಆದರೆ ಈ ಸಭಾ ಮಧ್ಯದಲ್ಲಿ ನನ್ನನ್ನು ಹೀಯಾಳಿಸಿದ ನಿನ್ನನ್ನು ನನ್ನ ಶಿಷ್ಯರಿಂದಲೇ ಗಾಬರಿಯಾಗುವಂತೆ ಕಟ್ಟಿಸದಿದ್ದರೆ ನಾನು ಮೀಸೆಯನ್ನು ಹೊತ್ತಿರುವುದು ವ್ಯರ್ಥವಲ್ಲವೇ? ಎಂದು ಹೇಳಿದನು.

**16. ಜಾತಿ ವ್ಯವಸ್ಥೆಯ ಬಗ್ಗೆ ವಿವೇಕಾನಂದರ ಅಭಿಪ್ರಾಯವೇನು? (1 ನೇ ಪ್ರಶ್ನೋತ್ತರ ಪತ್ರಿಕೆಯಲ್ಲಿ ಬಂದಿರುವ ಪ್ರಶ್ನೆ)**

**17. ಭಗತ್ ಸಿಂಗ್ ತನಗೆ ಪ್ರಿಯವಾದ ಮಾವಿನ ಹಣ್ಣೊಂದನ್ನು ನಿರಾಕರಿಸಿದ್ದಕ್ಕೆ ಕಾರಣ ಹೇಗೆ ತಿಳಿಯಿತು?**

**ಉತ್ತರ :** ಹನ್ನೆರಡು ವರ್ಷದ ಬಾಲಕ ಶಾಲೆಗೆ ಹೋಗದೆ ಅಮೃತಸರದ ಜಲಿಯನ್ ವಾಲಾಬಾಗ್ ಗೆ ಹೋಗಿ ಅಂತರ್ಮುಖಿಯಾಗಿ ನಿಂತು, ಅಲ್ಲಿದ್ದ ಮಣ್ಣನ್ನು ಹಣೆಗಿಟ್ಟುಕೊಂಡು ಇನ್ನಷ್ಟನ್ನು ಡಬ್ಬಿಯಲ್ಲಿ ಸೇಖರಿಸಿಕೊಂಡು ರಾತ್ರಿ ಮನೆಗೆ ಹಿಂದುರುಗಿದಾಗ ಎಂದಿನಂತೆ ಸಹೋದರಿ ಊಟಕ್ಕೆ ಎಬ್ಬಿಸಿದಾಗ ಒಲ್ಲೆ ಎನ್ನುತ್ತಾನೆ. ಕಾರಣ ಕೇಳಿದಾಗ ಮನೆಯ ಹಿಂಭಾಗಕ್ಕೆ ಕರೆದೊಯ್ದು ರಕ್ತಸಿಕ್ತವಾದ ಮಣ್ಣನ್ನು ತೋರಿಸುತ್ತಾನೆ ಅದು ಎಲ್ಲಿಯದೆಂದು ತಿಳಿದಾಗ ಭಗತ್ ಸಿಂಗ್ ತನಗೆ ಪ್ರಿಯವಾದ ಮಾವಿನ ಹಣ್ಣೊಂದನ್ನು ನಿರಾಕರಿಸಿದ್ದಕ್ಕೆ ಕಾರಣ ತಿಳಿಯುತ್ತದೆ.

**18. ಮಲೆನಾಡಿನಲ್ಲಿ ದೀಪದ ಬತ್ತಿಯ ಸಮಸ್ಯೆಯನ್ನು ಹೇಗೆ ಪರಿಹರಿಸಿಕೊಳ್ಳಲಾಯಿತು? (5 ನೇ ಪ್ರಶ್ನೋತ್ತರ ಪತ್ರಕೆಯಲ್ಲಿ ಬಂದಿರುವ ಪ್ರಶ್ನೆ)**

**19. ಪೈಗಳ ತಮ್ಮನ ನೂಲುಮದುವೆಯ ದಿನ ಅಂಗಳದಲ್ಲಿ ಏನೇನು ಸಿದ್ಧತೆಗಳಾಗುತ್ತಿದ್ದವು?**

**ಉತ್ತರ :** ಪೈಗಳ ತಮ್ಮನ ನೂಲುಮದುವೆಯ ದಿನ ಅಂಗಳದಲ್ಲಿ ಆಗುತ್ತಿದ್ದ ಸಿದ್ಧತೆಗಳು ಚಪ್ಪರ ಹಾಕಿದೆ.ಫೆಬ್ರವರಿಯಲ್ಲಿ ಎಂದೂ ಇಲ್ಲದ ಮಳೆ ಜಿನುಗುತ್ತಿದೆ.ಅಂದು ಶನಿವಾರವೊ. ರವಿವಾರವೊ ಅಥವಾ ಪ್ರಾಯಶಃ ಶಿವರಾತ್ರಿಯೊ,ಹೇಗೂ ಸಾಲೆ ಇಲ್ಲದ ದಿನ. ಚಪ್ಪರದಲ್ಲಿ ಒಂದು ಕಡೆಯಲ್ಲಿ ಲಡ್ಡುಗೆಗಳನ್ನು ಕಟ್ಟುತ್ತಾರೆ,ಮತ್ತೊಂದು ಕಡೆ ಮಂಡಿಗೆಗಳನ್ನು ಮಡುಚುತ್ತಾರೆ, ಬೇರೊಂದು ಕಡೆ ಸೇವಿಗೆಯನ್ನು ಒತ್ತುತ್ತಾರೆ.

**ಈ ಕೆಳಗಿನ ಸಂದರ್ಭವನ್ನು ಸ್ವಾರಸ್ಯದೊಂದಿಗೆ ಬರೆಯಿರಿ. 4*3=12**

**20. "ಬೆಳಕಿಗೊಲಿದವರ್ ಉರಿವ ಬತ್ತಿಯ ಕರುಕ ಕಾಣರು".**

**ಉತ್ತರ :** ಆಯ್ಕೆ: ಪ್ರಸ್ತುತ ಹೇಳಿಕೆಯನ್ನು ಪು.ತಿ.ನರಸಿಂಹಾಚಾರ್ ಅವರು ರಚಿಸಿರುವ 'ಏಕಾಂಕ ನಾಟಕಗಳು' ಕೃತಿಯಿಂದ ಆಯ್ದ 'ಶಬರಿ' ಎಂಬ ಗೀತನಾಟಕದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ:** ಶ್ರೀರಾಮನನ್ನು ಕಾಣುವುದೆ ಜೀವನದ ಏಕೈಕ ಗುರಿ ಎಂದು ಭಾವಿಸಿದ್ದ ಶಬರಿ ರಾಮಧ್ಯಾನದಲ್ಲಿ ತೊಡಗಿ ರಾಮನ ದರ್ಶನಕ್ಕಾಗಿ ಮತಂಗ ಋಷಿಯ ಆಶ್ರಮದಲ್ಲಿರುತ್ತಾಳೆ. ತಪಸ್ವಿಯಾದ ದನುವಿನ ಸಲಹೆಯಂತೆ ಮತಂಗಾಶ್ರಮವನ್ನು ಪ್ರವೇಶಿಸಿದ ರಾಮಲಕ್ಷ್ಮಣರು ಶಬರಿಯನ್ನು ಕಾಣುತ್ತಾರೆ. ತನ್ನ ಆರಾಧ್ಯದೈವ ಶ್ರೀರಾಮನನ್ನು ಕಂಡು, ಆನಂದಿಸಿ, ಧನ್ಯತೆಯ ಭಾವನೆಯಿಂದ ಮುಕ್ತಿಯನ್ನು ಬಯಸಿದ ಶಬರಿಗೆ ಶ್ರೀರಾಮನು ಮುಕ್ತಿಯನ್ನು ಕರುಣಿಸಿದ ಸಂದರ್ಭದಲ್ಲಿ ರಾಮನು ಲಕ್ಷ್ಮಣನಿಗೆ ಈ ಮಾತನ್ನು ಹೇಳುತ್ತಾನೆ.

**ಸ್ವಾರಸ್ಯ:** ರಾಮಲಕ್ಷ್ಮಣರನ್ನು ಆದರ ಆತಿಥ್ಯದಿಂದ ಸತ್ಕರಿಸಿ,ಗೌರವಿಸಿ ತನ್ನ ಬಾಳಿನ ಹಂಬಲ ತೀರಿದ ನಂತರ ಬಾಳು ಅರ್ಥಹೀನವೆಂದು ಭಾವಿಸಿ ಮುಕ್ತಿಯನ್ನು ಪಡೆಯುವ ಶಬರಿಯ ಪರಮಭಕ್ತಿ. ತಾಳ್ಮೆ, ಶ್ರೀರಾಮನ ಸರಳ ಹಿತ–ಮಿತ ಮೃದುವಚನ, ಲಕ್ಷ್ಮಣನ ವಿನಯದ ಸಹಚರತೆಯು ಇಲ್ಲಿ ಅತ್ಯಂತ ಮನೋಜ್ಞವಾಗಿ ಮೂಡಿಬಂದಿದೆ.

**21. "ಪ್ರಕೃತಿ ವಿಕೃತಿಯಾದ ಮನುಷ್ಯನಾಯುಷ್ಯಂ ಕುಂದುಗುಂ".**

**ಉತ್ತರ :** ಆಯ್ಕೆ: ಪ್ರಸ್ತುತ ಹೇಳಿಕೆಯನ್ನು ದುರ್ಗಸಿಂಹ ಕವಿ ರಚಿಸಿರುವ 'ಕರ್ಣಾಟಕ ಪಂಚತಂತ್ರಂ' ಕೃತಿಯಿಂದ ಆಯ್ದ 'ವೃಕ್ಷಸಾಕ್ಷಿ' ಎಂಬ ಗದ್ಯಪಾಠದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ:** ಧರ್ಮಬುದ್ಧಿ ಮತ್ತು ದುಷ್ಟಬುದ್ಧಿ ಇವರಿಬ್ಬರ ನಡುವಿನ ವ್ಯಾಜ್ಯವನ್ನು ಬಗೆಹರಿಸಲು ವಟವೃಕ್ಷದ ಬಳಿಗೆ ಬಂದ ಧರ್ಮಾಧಿಕರಣರು ವೃಕ್ಷವನ್ನು ಕುರಿತು ಯಕ್ಷಾದಿ ದಿವ್ಯದೇವತೆಗಳು ವಾಸಮಾಡುವ ವೃಕ್ಷವಾದ ಕಾರಣ ನಿನ್ನನ್ನು ಸಾಕ್ಷಿಯನ್ನಾಗಿ ಮಾಡಿ ಕೇಳುತ್ತಿದ್ದೇವೆ. ನೀನು ತಪ್ಪದೆ ಸತ್ಯವನ್ನು ನುಡಿ ಎಂದಾಗ ಆ ವೃಕ್ಷದ ಪೊಟರೆಯೊಳಗೆ ಅಡಗಿ ಕುಳಿತಿದ್ದ ದುಷ್ಟಬುದ್ಧಿಯ ತಂದೆ ಪ್ರೇಮಮತಿಯು ಮತಿಗೆಟ್ಟು, ಧರ್ಮವನ್ನು ಬಿಟ್ಟು, ಹೊನ್ನೆಲ್ಲವನ್ನು ಧರ್ಮಬುದ್ಧಿಯೇ ತೆಗೆದುಕೊಂಡನು ಎಂದು ನುಡಿದ ಸಂದರ್ಭದಲ್ಲಿ ಕವಿಯು ಮೇಲ್ಕಂಡ ಮಾತನ್ನು ಅಲಂಕಾರಿಕವಾಗಿ ಹೇಳಿದ್ದಾನೆ.

**ಸ್ವಾರಸ್ಯ:** ದುಷ್ಟಬುದ್ಧಿಯು ತನ್ನ ವಂಚನೆ, ಕಪಟತನ, ಮೋಸದಿಂದ ತಾನು ಹಾಳಾಗುವುದಲ್ಲದೆ, ಸಂಪತ್ತಿಗಾಗಿ ತನ್ನ ತಂದೆಯನ್ನು ಬಲಿಕೊಡುವ ಹೃದಯಹೀನ ಕೃತ್ಯದಿಂದ 'ಮಾಡಿದ್ದುಣ್ಣೊ ಮಾರಾಯ' ಎಂಬ ನೀತಿಯಂತೆ ಕೆಟ್ಟ ಫಲವನ್ನು ಅನುಭವಿಸುವಂತಾಯಿತು ಎಂದು ಅತ್ಯಂತ ಸ್ವಾರಸ್ಯಪೂರ್ಣವಾಗಿ ವರ್ಣಿಸಲಾಗಿದೆ.

**22. "ಎಲ್ಲ ಜನರಿಗೆ ಜೋರ ಮಾಡಿ ಕಸಿದು ಕೊಳ್ಳಿರಿ ಹತಾರ". (4 ನೇ ಪ್ರಶ್ನೋತ್ತರ ಪತ್ರಿಕೆಯಲ್ಲಿ ಬಂದಿರುವ ಪ್ರಶ್ನೆ)**

**23: "ತನ್ನ ಮಾತೆಯಂ ಸರ್ವಜನಮುಂ ಬಂಜೆಯೆನ್ನದಿರ್ದಪುದೆ".**

**ಉತ್ತರ :** ಆಯ್ಕೆ: ಪ್ರಸ್ತುತ ಹೇಳಿಕೆಯನ್ನು'ಲಕ್ಷ್ಮೀಶ' ಕವಿ ರಚಿಸಿರುವ 'ಜೈಮಿನಿ ಭಾರತ' ಕೃತಿಯಿಂದ ಆಯ್ದ 'ವೀರಲವ' ಎಂಬ ಪದ್ಯಪಾಠದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ:** ಶ್ರೀರಾಮನ ಅಶ್ವಮೇಧ ಯಾಗದ ಕುದುರೆಯು ವಾಲ್ಮೀಕಿಯ ಆಶ್ರಮವನ್ನು ಪ್ರವೇಶಿಸಿ, ಹಸುರಾದ ಹುಲ್ಲನ್ನು ತಿನ್ನುವಾಗ, ಆ ತೋಟದ ಕಾವಲು ಕಾಯುತ್ತಿದ್ದ ಲವನು ಕುದುರೆಯ ಬಳಿ ಬಂದು ಅದರ ನೆತ್ತಿಯ ಮೇಲಿದ್ದ ಇಡೀ ಭೂಮಂಡದಲ್ಲಿ ಕೌಸಲ್ಯೆಯ ಮಗನಾದ ಶ್ರೀರಾಮನೊಬ್ಬನೇ ವೀರನು.ಎದು ಆತನ ಯಜ್ಞದ ಕುದುರೆ. ಇದನ್ನು ನಿರ್ವಹಿಸುವವರು ಯಾರಾದರೂ ಇದ್ದರೆ ಅದನ್ನು ತಡೆಯಲಿ ಎಂದಿರ್ದ ಲೇಖನವನ್ನು ಓದಿ, ಕೋಪಗೊಂಡ ಸಂದರ್ಭದಲ್ಲಿ

ಮೇಲ್ಕಂಡ ಮಾತನ್ನು ಹೇಳಿಕೊಳ್ಳುತ್ತಾನೆ.

**ಸ್ವಾರಸ್ಯ:** ಲವಕುಶರು ಹುಟ್ಟಿದ್ದು ಋಷ್ಯಾಶ್ರಮದಲ್ಲಾದರೂ ಸಹಜ ಕ್ಷಾತ್ರಗುಣ, ವೀರತೆಯಿಂದ ಕುದುರೆಯನ್ನು ಕಟ್ಟಿಹಾಕುತ್ತಾರೆ. ಕಷ್ಟ–ಸವಾಲುಗಳು ಬಂದಾಗ ಚಿಕ್ಕವರು, ಅಸಮರ್ಥರು ಎಂದು ಕೂರದೆ ದಿಟ್ಟತನದಿಂದ ಎದುರಿಸಬೇಕು. ಬಾಲ್ಯ ಸಹಜ ಸಾಹಸ ಪ್ರವೃತ್ತಿ ಹಾಗೂ ಲವನಿಗೆ ತನ್ನ ತಾಯಿಯ ಮೇಲಿದ್ದ ಗೌರವ, ಅಭಿಮಾನಗಳನ್ನು ಇಲ್ಲಿ ಸ್ವಾರಸ್ಯಪೂರ್ಣವಾಗಿ ವರ್ಣಿಸಲಾಗಿದೆ.

**ಈ ಕೆಳಗಿನ ಕವಿಗಳ/ಸಾಹಿತಿಗಳ ಜನ್ಮಸ್ಥಳ, ಕಾಲ, ಕೃತಿ ಮತ್ತು ಬಿರುದು/ಪ್ರಶಸ್ತಿಗಳನ್ನು ಕುರಿತು ವಾಕ್ಯರೂಪದಲ್ಲಿ ಬರೆಯಿರಿ. 2X3=6**

**24. ಸಾರಾ ಅಬೂಬಕ್ಕರ್.**

**ಉತ್ತರ :** ಲೇಖಕಿ ಸಾರಾ ಅಬೂಬಕ್ಕರ್ ಅವರು 30 ಜೂನ್ 1936 ರಂದು ಕಾಸರಗೋಡಿನಲ್ಲಿ ಜನಿಸಿದರು, ಮಹಿಳೆಯರು ಸಾಹಿತ್ಯ ರಚನೆಯಲ್ಲಿ ತೊಡಗಿಕೊಳ್ಳುವುದು ಅಪರೂಪ ಎನ್ನುವ ಸಂದರ್ಭದಲ್ಲಿ ಬರವಣಿಗೆ ಆರಂಭಿಸಿದ ಇವರು ಇಂದು ನಾಡಿನ ಖ್ಯಾತ ಕಥೆಗಾರ್ತಿ ಹಾಗೂ ಕಾದಂಬರಿಗಾರ್ತಿಯಾಗಿ ಜನಪ್ರಿಯತೆಯನ್ನು ಗಳಿಸಿದ್ದಾರೆ.

ಚಂದ್ರಗಿರಿಯ ತೀರದಲ್ಲಿ, ಸಹನಾ, ಕದನ ವಿರಾಮ, ವಜ್ರಗಳು ಸುಳಿಯಲ್ಲಿ ಸಿಕ್ಕವರು, ತಳ ಒಡೆದ ದೋಣಿಯಲಿ ಮೊದಲಾದವು ಇವರ ಪ್ರಮುಖ ಕಾದಂಬರಿಗಳು. ಚಪ್ಪಲಿಗಳು, ಖೆಡ್ಡಾ, ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು, ಪಯಣ, ಇವು ಕಥಾ ಸಂಕಲನಗಳು. ಇವರು ಸಾಹಿತ್ಯ ಕೃಷಿಗಾಗಿ ಅನೇಕ ಪ್ರಶಸ್ತಿಗಳು ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ನೃಪತುಂಗ ಪ್ರಶಸ್ತಿ ಲಭಿಸಿವೆ. ಕರ್ನಾಟಕದ ಸಂಸ್ಕೃತಿ ಚಿಂತಕರಲ್ಲಿ ಇವರೂ ಕೂಡ ಒಬ್ಬರಾಗಿದ್ದಾರೆ.

**25. ಕುಮಾರವ್ಯಾಸ. (4ನೇ ಪ್ರಶ್ನೋತ್ತರ ಪತ್ರಿಕೆಯಲ್ಲಿ ಬಂದಿರುವ ಪ್ರಶ್ನೆ)**

**ಈ ಕೆಳಗಿನ ಪದ್ಯಭಾಗವನ್ನು ಪೂರ್ಣ ಮಾಡಿರಿ. (ತಪ್ಪಿಲ್ಲದೇ ಬರೆದ ಪ್ರತಿ ಪೂರ್ಣಸಾಲಿಗೆ 1 ಅಂಕ) 1X4=4**

**26. ನೀಲಮೇಘ_________ ಯುಗ ಯುಗಗಳ____________**

**ಹಾರುತಿದೆ ನೋಡಿದಿರಾ. ಅಥವಾ ________ಹಾರುತಿದೆ ನೋಡಿದಿರಾ. (4ನೇ ಪ್ರಶ್ನೋತ್ತರ ಪತ್ರಿಕೆಯಲ್ಲಿ ಬಂದಿರುವ ಪ್ರಶ್ನೆ)**

**ಈ ಕೆಳಗಿನ ಪದ್ಯಭಾಗವನ್ನು ಓದಿ, ಅರ್ಥಮಾಡಿಕೊಂಡು ಮೌಲ್ಯವನ್ನಾಧರಿಸಿ ಸಾರಾಂಶ ಬರೆಯಿರಿ. 1X4=4**

**27. ನಿಮಗೆ ಪೊಡೆಮಟ್ಟು ಪೋಪೀ ।**
**ಸಮಕಟ್ಟಿಂ ಬಂದೆನಹಿತರೊಳ್ ಸಂಧಿಯನೇಂ ॥**
**ಸಮಕೊಳಿಸಲೆಂದು ಬಂದೆನೆ ।**
**ಸಮರದೊಳೆನಗಜ್ಜ ಪೇಳಿಮಾವುದು ಕಜ್ಜಂ ॥**

**ಉತ್ತರ :** ದುರ್ಯೋಧನನು ತನ್ನ ತಂದೆ ತಾಯಿಯರ ಅಪೇಕ್ಷೆಯಂತೆ ರಣರಂಗದಲ್ಲಿ ಶರಶಯ್ಯೆಯಲ್ಲಿ ಮಲಗಿದ್ದ ತಾತ ಭೀಷ್ಮರ ಸಲಹೆಯನ್ನು ಪಡೆಯಲು ಬಂದಾಗ ಭೀಷ್ಮರು "ಪಾಂಡವರೊಂದಿಗೆ ಯುದ್ಧ ಮಾಡದೇ, ಸಂಧಿಯನ್ನು ಮಾಡಿಕೋ, ಅವರು ಎಂದಿಗೂ ನನ್ನ ಮಾತುಗಳನ್ನು ಮೀರುವವರಲ್ಲ, ನೀನು ಸಹ ಹೇಳಿದ್ದನ್ನು ಮೀರದೆ ಕೇಳು" ಎಂದು ದುರ್ಯೋಧನನಿಗೆ ಹೇಳಿದಾಗ, ಆತ ಮುಗುಳ್ನಗೆ ನಕ್ಕು "ತಾತ ನಿಮಗೆ ನಮಸ್ಕರಿಸಿ ನಿಮ್ಮಿಂದ ಆಶೀರ್ವಾದವನ್ನು ಪಡೆದು ಹೋಗುವ ಉದ್ದೇಶದಿಂದ ಬಂದೆನೇ ವಿನಃ ಶತ್ರುಗಳಾದ ಪಾಂಡವರೊಂದಿಗೆ ಸಂಧಿಯ ಒಪ್ಪಂದವನ್ನು ಏರ್ಪಡಿಸು ಎಂದು ಕೇಳಲು ಬಂದೇನೇ. ಅಜ್ಜ ನಾಳೆ ನಡೆಯುವ ಸಮರದಲ್ಲಿ ನನ್ನ ಕೆಲಸ ಯಾವುದು ಹೇಳು" ಎಂದನು.

ಒಟ್ಟಾರೆಯಾಗಿ ಭೀಷ್ಮರ ಎದುರಿನಲ್ಲಿಯೇ ಸಂಧಿಗೆ ಒಪ್ಪದೆ, ಯುದ್ಧ ಮಾಡಿಯೇ ತೀರಬೇಕೆಂಬ ದುರ್ಯೋಧನನ ಛಲ ಅವನ ಸ್ವಭಾವಕ್ಕೆ ತಕ್ಕದಾಗಿ ವ್ಯಕ್ತಗೊಂಡಿರುವುದು ಹಾಗೂ ಹಿರಿಯರನ್ನು ಆಧರಿಸಿ ಗೌರವಿಸುವುದು, ವಿನಯ, ಕಾರ್ಯದಕ್ಷತೆಯ ದೃಢನಿಶ್ಚಯ, ಸಮರ್ಥ ನಾಯಕನ ಗುಣಲಕ್ಷಣಗಳು ಈ ಪದ್ಯದಲ್ಲಿ ಕಂಡುಬರುವ ಉತ್ತಮ ಮೌಲ್ಯಗಳಾಗಿವೆ.

**ಈ ಕೆಳಗಿನ ಪ್ರಶ್ನೆಗಳಿಗೆ ಎಂಟು–ಹತ್ತು ವಾಕ್ಯಗಳಲ್ಲಿ ಉತ್ತರಿಸಿರಿ. 2X4=8**

**28. ವಿಶ್ವೇಶ್ವರಯ್ಯ ಅವರು ಮೈಸೂರು ದಿವಾನರಾಗಿ ಸಲ್ಲಿಸಿದ ಸೇವೆಯನ್ನು ಕುರಿತು ಬರೆಯಿರಿ?**

**ಅಥವಾ**

**ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸ್ಥಾಪಿಸಲಾದ 'ಪ್ರಜಾಪ್ರತಿನಿಧಿ ಸಭೆ' ಹಾಗೂ 'ನ್ಯಾಯ ವಿಧಾಯಕ ಸಭೆ'ಯನ್ನು ಕುರಿತು ವಿವರಿಸಿ?**

**ಉತ್ತರ :** ಮೈಸೂರು ಸಂಸ್ಥಾನದ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ವಿಶ್ವೇಶ್ವರಯ್ಯ ಅವರನ್ನು ದಿವಾನರನ್ನಾಗಿ ನೇಮಿಸಿದ ನಂತರ ಆಡಳಿತದಲ್ಲಿ, ಕಚೇರಿಯ ಕೆಲಸ ಕಾರ್ಯಗಳಲ್ಲಿ ದಕ್ಷತೆ ಮತ್ತು ಪ್ರಾಮಾಣಿಕತೆಗೆ ಒತ್ತು ನೀಡಿ ಸ್ಥಳೀಯ ಮಟ್ಟದಲ್ಲಿ ಕೇಂದ್ರೀಕೃತವಾಗಿದ್ದ ನ್ಯಾಯಾಂಗ ಮತ್ತು ಕಾರ್ಯಾಂಗಗಳ ಅಧಿಕಾರವನ್ನು ಪ್ರತ್ಯೇಕಗೊಳಿಸಿದರು. ವಿಶ್ವೇಶ್ವರಯ್ಯ ಅವರು 1913 ರಲ್ಲಿ ಪ್ರಾಥಮಿಕ ಶಿಕ್ಷಣ ನಿಬಂಧನೆಯನ್ನು ಜಾರಿಗೆ ತಂದು, ಸಂಸ್ಥಾನವೇ ಪ್ರತ್ಯೇಕವಾದ ಪ್ರೌಢಶಿಕ್ಷಣ ಅಂತಿಮ ಪರೀಕ್ಷೆ ನಡೆಸುವ ಯೋಜನೆಯನ್ನು ಆರ್ಥಿಕ ಪರಿಷತ್ತಿನ ಮೂಲಕ ರೂಪುಗೊಳಿಸಿದರು.ಮೈಸೂರು ವಿಶ್ವವಿದ್ಯಾನಿಲಯದ ಜೊತೆಗೆ ಬೆಂಗಳೂರಿನ ಮೆಕಾನಿಕಲ್ ಇಂಜನಿಯರಿಂಗ್ ಶಾಲೆ, ಮೈಸೂರಿನಲ್ಲಿ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಗಳನ್ನು ಹಾಗೂ ಕನ್ನಡ ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಿದರು.

ವಿಶ್ವೇಶ್ವರಯ್ಯ ಅವರು ಕೈಗಾರಿಕೆಗೆ ಅಗ್ರ ಪ್ರಾಶಸ್ತ್ಯ ನೀಡಿ ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ, ಹೆಂಚು, ಸಕ್ಕರೆ, ಗಂಧದ ಎಣ್ಣೆ, ಕಾಗದ ಕಾರ್ಖಾನೆ ಹೀಗೆ ನೂರಾರು ಕೈಗಾರಿಕೆಗಳನ್ನು ಆರಂಭಿಸಿದರು. 1913 ರಲ್ಲಿ ಮೈಸೂರು ಬ್ಯಾಂಕ್, ಕೈಗಾರಿಕೆ ಹೂಡಿಕೆ ಮತ್ತು ಅಭಿವೃದ್ಧಿ ನಿಧಿ, ಸಾರ್ವಜನಿಕ ಜೀವವಿಮಾ ಯೋಜನೆ, ಪ್ರಾಂತೀಯ ಸಹಕಾರಿ ಬ್ಯಾಂಕ್ ಗಳನ್ನು ಸ್ಥಾಪಿಸಿದರು. ಕಾವೇರಿ ನದಿಗೆ ಕನ್ನಂಬಾಡಿ ಜಲಾಶಯ ನಿರ್ಮಾಣ, ರೈಲು ಮಾರ್ಗಗಳ ವಿಸ್ತರಣೆಗೆ ಕ್ರಮ, ಮಾರಿ ಕಣಿವೆ ಜಲಾಶಯದ ನೀರು ಹಂಚಿಕೆಯ ಪುನರ್ವ್ಯವಸ್ಥೆ, ಸಣ್ಣ ನೀರಾವರಿ ವ್ಯವಸ್ಥೆಗೆ ಮರುಜೀವ. ಹೀಗೆ ಅನೇಕ ಕಾರ್ಯಗಳನ್ನು ಅತ್ಯಂತ ಯಶಸ್ವಿಯಾಗಿ ಕಾರ್ಯಗತಗೊಳಿಸಿದರು.

ಅಥವಾ

'ಮಾದರಿ ಮೈಸೂರು' ಸಂಸ್ಥಾನದ ನಿರ್ಮಾತೃ ನಾಲ್ವಡಿ ಕೃಷ್ಣರಾಜ ಒಡೆಯರು ಅರಸು ಮನೆತನದಿಂದ ಬಂದವರಾಗಿದ್ದರೂ

ಸಹ,ಜನತೆ ಆಡಳಿತದಲ್ಲಿ ಪಾಲ್ಗೊಳ್ಳುವಿಕೆಯ ಪರವಾಗಿದ್ದರು.

**ಪ್ರಜಾಪ್ರತಿನಿಧಿ ಸಭೆ:** ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ "ಪ್ರಜಾಪ್ರತಿನಿಧಿ ಸಭೆ"ಯ ಜನಪ್ರತಿನಿಧಿ ಸಭೆಯಾಗಿ ಪರವರ್ತನೆಯಾಯಿತು. 1923 ರಲ್ಲಿ ಹೊಸ ಕಾನೂನೊಂದನ್ನು ಜಾರಿಗೆ ತಂದು, ಪ್ರಜಾಪ್ರತಿನಿಧಿ ಸಭೆಯನ್ನು ಶಾಸನ ಬದ್ಧ ಸಂಸ್ಥೆಯನ್ನಾಗಿ ಮಾರ್ಪಡಿಸಿದರು. ಇದು ಪ್ರಜಾತಂತ್ರದ ದೃಷ್ಟಿಯಿಂದ ಭಾರತದಲ್ಲಿಯೇ ಮಾದರಿಯಾದ ಸಂಸ್ಥೆಯಾಗಿ ಕಾರ್ಯ ನಿರ್ವಹಿಸಲು ಆರಂಭಿಸಿತು. ಪ್ರಜಾಪ್ರತಿನಿಧಿ ಸಭೆಯ ವರ್ಷಕ್ಕೆ ಎರಡು ಬಾರಿ ಅಂದರೆ ಜೂನ್ 1 ಮಹರಾಜರ ವರ್ಧಂತಿ, ಅಕ್ಟೋಬರ್ 2 ದಸರಾ ಮಹೋತ್ಸವ ಸಂದರ್ಭಗಳಲ್ಲಿ ಸಮಾವೇಶಗೊಂಡು ಕಲಾಪಗಳನ್ನು ನಡೆಸುತ್ತಿತ್ತು ಅಲ್ಲಿ ವಾರ್ಷಿಕ ಆಯವ್ಯಯ ಪರಿಶೀಲನೆ, ಪ್ರಶ್ನೋತ್ತರಗಳು, ಠರಾವುಗಳನ್ನು ಮಂಡಿಸುವುದು ಮುಂತಾದ ಸಂಸದೀಯ ಮಾದರಿಯ ನಡುವಳಿಕೆಗಳು ನಡೆಯುತ್ತಿದ್ದವು. ಪ್ರಜಾಪ್ರತಿನಿಧಿ ಸಭೆಯಲ್ಲಿದ್ದ 275 ಸದಸ್ಯರಲ್ಲಿ ಹೆಚ್ಚು ಪ್ರತಿನಿಧಿಗಳು ಜನರಿಂದ ಆಯ್ಕೆಯಾದವರಾಗಿದ್ದರು.

**ನ್ಯಾಯ ವಿಧಾಯಕ ಸಭೆ :** ನಾಲ್ವಡಿ ಕೃಷ್ಣರಾಜ ಒಡೆಯರು 1907 ರಲ್ಲಿ ನ್ಯಾಯ ವಿಧಾಯಕ ಸಭೆಯನ್ನು ಸಹ ಸ್ಥಾಪಿಸಿದರು. ಇದರ ಸದಸ್ಯರ ಸಂಖ್ಯೆ 50. ಇದರಲ್ಲಿ ಜನರಿಂದ ಆಯ್ಕೆಯಾದವರು 22 ಸದಸ್ಯರು. ಮೇಲ್ಮನೆಯ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಈ ಸಂಸ್ಥೆ ಜೂನ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ಬೆಂಗಳೂರಿನಲ್ಲಿ ಸಮಾವೇಶಗೊಳ್ಳುತ್ತಿತ್ತು. ಪ್ರಜಾಪ್ರತಿನಿಧಿ ಸಭೆಯಲ್ಲಿ ಮಂಡಿಸಿದ ಎಲ್ಲಾ ವಿಷಯಗಳನ್ನು ಸಹ ವಿಮರ್ಶಿಸುವ ಅಧಿಕಾರ ಆ ಸಭೆಗೆ ಇದ್ದಿತು. ಮುಖ್ಯವಾಗಿ ಯಾವದೇ ಕಾನೂನುಗಳನ್ನು ಜಾರಿಗೊಳಿಸಲು ಆ ಸಭೆಯ ಅನುಮತಿ ಅಗತ್ಯವಾಗಿತ್ತು. ಆ ಸಭೆಗೆ ಸರ್ಕಾರದ ಖರ್ಚುಗಳನ್ನು ಕಡಿಮೆ ಮಾಡುವ ಅಧಿಕಾರ ಸಹ ಇದ್ದಿತು.

**29. ನಾವು ಯಾವ ಸಂಕಲ್ಪ ಕೈಗೊಳ್ಳಬೇಕೆಂಬುದು ಕವಿ ಶಿವರುದ್ರಪ್ಪನವರ ಆಶಯವಾಗಿದೆ ? ವಿವರಿಸಿ.**

**ಅಥವಾ**

**ಸಂಕಲ್ಪ ಮತ್ತು ಅನುಷ್ಠಾನದ ಕುರಿತು ಕವಿ ಶಿವರುದ್ರಪ್ಪನವರ ಅಭಿಪ್ರಾಯವನ್ನು ವಿವರಿಸಿ.**

**ಉತ್ತರ:** ನಮ್ಮ ಸುತ್ತುಲೂ ಆವರಿಸಿರುವ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸಬೇಕೆಂಬ ಸಂಕಲ್ಪ ಮಾಡಿದರೆ, ಅಲ್ಲಿ ಜ್ಞಾನವೆಂಬ ಹಣತೆಯನ್ನು ಹಚ್ಚುವುದರ ಮೂಲಕ ಆರೋಗ್ಯಕರ ಸಮಾಜವನ್ನು ನಿರ್ಮಾಣ ಮಾಡಬಹುದಾಗಿದೆ. ಬಿರುಗಾಳಿಗೆ ಹೊಯ್ದಾಡುವ ಸಂಸಾರವೆಂಬ ಹಡಗನ್ನು ಎಚ್ಚರದಲ್ಲಿ ಮುನ್ನಡೆಸಬೇಕು ಎಂಬ ಸಂಕಲ್ಪ ಕೈಗೊಂಡರೆ ಜೀವನವನ್ನು ಅತ್ಯಂತ ಸಮತೋಲನದಿಂದ ಮುನ್ನಡೆಸಲು ಸಾಧ್ಯವಾಗುತ್ತದೆ. ಪರಿಸರವು ನಿರಂತರವಾಗಿ ಮಲಿನಗೊಳ್ಳುತ್ತಿರುವುದರಿಂದ ನದೀಜಲಗಳು ಕಲುಷಿತವಾಗಿವೆ. ಹೀಗೆ ಕಲುಷಿತಗೊಂಡಿರುವ ಪರಸರವನ್ನು ಸ್ವಚ್ಛ ಮಾಡಬೇಕಾದರೆ ಮುಂಗಾರಿನ ಮಳೆಯ ರೀತಿಯಲ್ಲಿ ಪರಿಸರ ಸ್ವಚ್ಛತಾ ಕಾರ್ಯದಲ್ಲಿ ತೊಡಗಿಸಿಕೊಳ್ಳಬೇಕು. ಬರಡಾಗಿರುವ ಕಾಡುಮೇಡುಗಳನ್ನು ಸಂರಕ್ಷಿಸುವ ಸಂಕಲ್ಪ ಮಾಡಿದರೆ ಗಿಡಮರಗಳನ್ನು ನೆಟ್ಟು ಪೋಷಿಸುವ ಕೆಲಸವನ್ನು ಮಾಡಬೇಕು. ಸಮಾಜದಲ್ಲಿ ಅನೇಕ ಜನರು ಭಯಭೀತರಾಗಿ,ಆತ್ಮವಿಶ್ವಾಸವನ್ನು ಕಳೆದುಕೊಂಡಿದ್ದಾರೆ. ಇಂಥವರನ್ನು ಮೇಲೆತ್ತಲು ಹೊಸ ಭರವಸೆ, ಆತ್ಮವಿಶ್ವಾಸವನ್ನು ತುಂಬುವುದರ ಮೂಲಕ ಚೈತನ್ಯವನ್ನು ಉಂಟುಮಾಡೋಣ. ಧರ್ಮ, ಜಾತಿ ಭಾಷೆ ಮುಂತಾದ ಕಾರಣಗಳಿಂದ ಮನುಜ – ಮನುಜರ ನಡುವೆ ಭೇದಭಾವಗಳು ನಿರ್ಮಾಣಗೊಂಡಿವೆ. ಇವುಗಳನ್ನು ಹೋಗಲಾಡಿಸಬೇಕೆಂಬ ಸಂಕಲ್ಪ ಕೈಗೊಂಡರೆ ಮನುಷ್ಯರ ನಡುವೆ ಪ್ರೀತಿ, ವಿಶ್ವಾಸ, ಸಹೋದರತೆ, ಸಹಬಾಳ್ವೆ ಮುಂತಾದ ಮೌಲ್ಯಗಳನ್ನು ಬಿತ್ತೋಣ. ಪ್ರತಿಯೊಂದು ಮತಗಳು ನಮಗೆ ದಾರಿಯನ್ನು ತೋರಿಸಿವ ದೀವಿಗೆಗಳು ಎಂಬುದನ್ನು ತಿಳಿಸುವ ಸಂಕಲ್ಪ ಕೈಗೊಂಡರೆ ಪ್ರತಿಯೊಂದು ಧರ್ಮದ ಮಹತ್ವ ಮೌಲ್ಯಗಳನ್ನು ತಿಳಿಸುವಂತಹ ಕೆಲಸಗಳನ್ನು ಮಾಡೋಣ . ಭಯ ಮತ್ತು ಅನುಮಾನ ಆವರಿಸಿರುವ ಕಣ್ಣುಗಳಲ್ಲಿ ಚೈತನ್ಯ ತುಂಬುವಂತಹ ಸಂಕಲ್ಪ ಕೈಗೊಂಡರೆ ನಾಳಿನ ಸುಂದರ ಬದುಕಿನ ಬಗ್ಗೆ ಕನಸುಗಳನ್ನು ಕಟ್ಟುವಂತಹ ಕೆಲಸಗಳನ್ನು ಮಾಡೋಣ. ಹೀಗೆ ಸಂಕಲ್ಪ ಮತ್ತು ಅನುಷ್ಠಾನದ ಕುರಿತು ಕವಿ ಶಿವರುದ್ರಪ್ಪನವರ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**30. ಈ ಕೆಳಗಿನ ಗದ್ಯಭಾಗವನ್ನು ಓದಿಕೊಂಡು ,ಪ್ರಶ್ನೆಗಳಿಗೆ ಉತ್ತರಿಸಿರಿ. (ಅಂಶಗಳನ್ನಾಧರಿಸಿ ಪ್ರತಿ ಸರಿಯುತ್ತರಕ್ಕೆ 2 ಅಂಕಗಳು) 2X2=4**

ಯುದ್ಧ ಇತಿಹಾಸದುದ್ದಕ್ಕೂ ತನ್ನ ಇರುವಿಕೆಯನ್ನು ತೋರಿಸುತ್ತಾ ಬಂದಿದೆ. ಯಾವುದು ಸಾಮ್ರಾಜ್ಯದ ಏಳುಬೀಳುಗಳಲ್ಲಿ ಅದು ಪ್ರಮುಖ ಪಾತ್ರವಹಿಸಿದೆ. ಯುದ್ಧ ನಡೆಯಲು ಕಾರಣಗಳು ಹಲವು, ಸಾಮ್ರಾಜ್ಯ ವಿಸ್ತರಣೆ, ಲೋಭ, ವೀರತೆಯ ಪ್ರದರ್ಶನ ಒಂದು ಕಡೆಯಾದರೆ, ಕುಟುಂಬ ಕಲಹಗಳೂ ಯುದ್ಧಕೆ ನಾಂದಿ ಹಾಡಿದ ಘಟನೆಗಳು ದಾಖಲಾಗಿವೆ. ಸುಮಾರು ಐದು ಸಾವಿರ ವರ್ಷಗಳ ಹಿಂದೆ ನಡೆದ ಕುರುಕ್ಷೇತ್ರ ಯುದ್ಧ ಇದಕ್ಕೆ ಸ್ಪಷ್ಟ ನಿದರ್ಶನ. ಕುರುವಂಶದ ರಾಜಕುಮಾರರ ಅಂತಃಕಲಹ ಐವತ್ತು ಲಕ್ಷ ಜನರ ಪ್ರಾಣಹಾನಿಯೊಂದಿಗೆ ಪರ್ಯವಸಾನವಾಯಿತು. ಐತಿಹ್ಯದಂತೆ ಕೇವಲ ಹದಿನೆಂಡು ದಿನ ನಡೆದ ಈ ಯುದ್ಧ, ಕಂಡ ಪರಿಣಾಮ ಅತ್ಯಂತ ಘೋರ.

ಭಾರತ ತನ್ನ ಇತಿಹಾಸದಲ್ಲಿ ಕಂಡ ಅತ್ಯಂತ ವರ್ಣರಂಜಿತ ವ್ಯಕ್ತಿತ್ವ ಕೌಟಿಲ್ಯನದು. ತನ್ನ ಹಠದ ಪಟ್ಟನ್ನು ಸಡಿಲಿಸದೆ, ಮನೋನಿಶ್ಚಯದಂತೆ ಅಪೂರ್ವಕುಶಲತೆಯನ್ನು ತೋರಿದ ಪ್ರತಿಭಾವಂತನೀತ. ಸರಳತಂತ್ರೋಪಾಯಗಳಿಂದ ಚಂದ್ರಗುಪ್ತನ ಶತ್ರುಬಲವನ್ನು ನಿರಾವಲಂಬನಗೊಳಿಸಿ ಮೌರ್ಯ ವಂಶದ ಸ್ಥಾಪನೆಗೆ ಮಾರ್ಗರ್ಶಕನಾಗುತ್ತಾನೆ. ತನ್ನನ್ನೆ ಹಿಂಬಾಲಿಸಿ ಬಂದ ರಾಜ್ಯಲಕ್ಷ್ಮೀ, ಅಧಿಕಾರಗಳನ್ನು ದೂರೀಕರಸಿ ವಿರಕ್ತನಂತೆ ಆಶ್ರಮವಾಸಿಯಾಗುತ್ತೆನೆ. ಚಾಣಕ್ಯನ ಪ್ರಕಾರ ಯುದ್ಧದಲ್ಲಿ ಮೂರು ವಿಧಿಗಳು. ಮೊದಲನೆಯದು ಪ್ರಕಾಶಯುದ್ಧ– ಸೂಚಿತ ಸ್ಥಳದಲ್ಲಿ ನಿರ್ದಿಷ್ಟ ಸಮಯಕ್ಕೆ ನಡೆಯುವ ಸಂಗ್ರಾಮ. ಎರಡನೆಯದು ಕೂಟಯುದ್ಧ– ತಂತ್ರಗಳ ಮೂಲಕ ಯುದ್ಧ ಮಾಡುವುದು. ಮೂರನೆಯದು ಮೌನಯುದ್ಧ–ಶತ್ರು ಅಧಿಕಾರಿಗಳನ್ನು ನಾಶಪಡಿಸಲು ಗುಪ್ತ ಕಾರ್ಯಾಚರಣೆ ನಡೆಸುವುದು. ಯಾವಗ ರಾಜ ಶತ್ರುಗಳಿಗಿಂತ ಬಲಿಷ್ಠನಾಗಿದ್ದು ಪರಿಸ್ಥಿತಿ ಅನುಕೂಲಕರವಾಗಿರುತ್ತದೋ ಆಗ ಅವನು ಮುಕ್ತ ಯುದ್ಧವನೇ ಮಾಡಬೇಕು. ಸೂಚಿತ ಸ್ಥಳದಲ್ಲಿ, ನಿರ್ದಿಷ್ಟ ಸಮಯದಲ್ಲಿ ನಡೆಯುವ ಮುಕ್ತ ಯುದ್ಧವೇ ಧರ್ಮಯುದ್ಧ.

**ಅ) ಚಾಣಕ್ಯನ ಪ್ರಕಾರ ಮೂರು ಬಗೆಯ ಯುದ್ಧಗಳಾವುವು ? ವಿವರಿಸಿ.**

**ಉತ್ತರ:** . ಚಾಣಕ್ಯನ ಪ್ರಕಾರ ಯುದ್ಧದಲ್ಲಿ ಮೂರು ವಿಧಿಗಳು. ಮೊದಲನೆಯದು ಪ್ರಕಾಶಯುದ್ಧ– ಸೂಚಿತ ಸ್ಥಳದಲ್ಲಿ ನಿರ್ದಿಷ್ಟ ಸಮಯಕ್ಕೆ ನಡೆಯುವ ಸಂಗ್ರಾಮ. ಎರಡನೆಯದು ಕೂಟಯುದ್ಧ– ತಂತ್ರಗಳ ಮೂಲಕ ಯುದ್ಧ ಮಾಡುವುದು. ಮೂರನೆಯದು ಮೌನಯುದ್ಧ–ಶತ್ರು ಅಧಿಕಾರಿಗಳನ್ನು ನಾಶಪಡಿಸಲು ಗುಪ್ತ ಕಾರ್ಯಾಚರಣೆ ನಡೆಸುವುದು.

ಆ) **ಯುದ್ಧಕ್ಕೆ ಕಾರಣವಾದ ಅಂಶಗಳನ್ನು ಒಂದು ನಿದರ್ಶನದೊಂದಿಗೆ ಬರೆಯಿರಿ.**

**ಉತ್ತರ:** ಯುದ್ಧ ಇತಿಹಾಸದುದ್ದಕ್ಕೂ ತನ್ನ ಇರುವಿಕೆಯನ್ನು ತೋರಿಸುತ್ತಾ ಬಂದಿದೆ. ಯಾವುದು ಸಾಮ್ರಾಜ್ಯದ ಏಳುಬೀಳುಗಳಲ್ಲಿ ಅದು ಪ್ರಮುಖ ಪಾತ್ರವಹಿಸಿದೆ. ಯುದ್ಧ ನಡೆಯಲು ಕಾರಣಗಳು ಹಲವು, ಸಾಮ್ರಾಜ್ಯ ವಿಸ್ತರಣೆ, ಲೋಭ, ವೀರತೆಯ ಪ್ರದರ್ಶನ ಒಂದು ಕಡೆಯಾದರೆ, ಕುಟುಂಬ ಕಲಹಗಳೂ ಯುದ್ಧಕೆ ನಾಂದಿ ಹಾಡಿದ ಘಟನೆಗಳು ದಾಖಲಾಗಿವೆ. ಸುಮಾರು ಐದು ಸಾವಿರ ವರ್ಷಗಳ ಹಿಂದೆ ನಡೆದ ಕುರುಕ್ಷೇತ್ರ ಯುದ್ಧ ಇದಕ್ಕೆ ಸ್ಪಷ್ಟ ನಿದರ್ಶನ. ಕುರುವಂಶದ ರಾಜಕುಮಾರರ ಅಂತಃಕಲಹ ಐವತ್ತು ಲಕ್ಷ ಜನರ ಪ್ರಾಣಹಾನಿಯೊಂದಿಗೆ ಪರ್ಯವಸಾನವಾಯಿತು. ಐತಿಹ್ಯದಂತೆ ಕೇವಲ ಹದಿನೆಂಡು ದಿನ ನಡೆದ ಈ ಯುದ್ಧ, ಕಂಡ ಪರಿಣಾಮ ಅತ್ಯಂತ ಘೋರ.

## ವಿಭಾಗ–''ಬಿ'' (ಅನ್ವಯಿಕ ವ್ಯಾಕರಣ, ಅಲಂಕಾರ, ಛಂದಸ್ಸು)

**ಈ ಕೆಳಗಿನ ಪ್ರಶ್ನೆಗಳಿಗೆ ಅಥವಾ ಅಪೂರ್ಣ ಹೇಳಿಕೆಗಳಗೆ ನಾಲ್ಕು ಆಯ್ಕೆಗಳನ್ನು ನೀಡಲಾಗಿದೆ. ಅವುಗಳಲ್ಲಿ ಹೆಚ್ಚು ಸೂಕ್ತವಾದ ಉತ್ತರವನ್ನು ಆರಿಸಿ ಕ್ರಮಾಕ್ಷರದೊಂದಿಗೆ ಬರೆಯಿರಿ (ಪ್ರತಿ ಸರಿಯುತ್ತರಕ್ಕೆ 1 ಅಂಕ) 10X1= 10**

**31. 'ಸಪ್ತಮೀ' ವಿಭಕ್ತಿ ಪ್ರತ್ಯಯದ ಕಾರಕಾರ್ಥ.**

ಎ) ಸಂಬಂಧ ಬಿ) ಸಂಪ್ರದಾನ

ಸಿ) ಅಧಿಕರಣ ಡಿ)ಅಪದಾನ

**ಉತ್ತರ : (ಸಿ) ಅಧಿಕರಣ**

**32. 'ವಾಗ್ದೇವಿ' ಪದವು ಈ ಸಂಧಿಗೆ ಉದಾಹರಣೆಯಾಗಿದೆ.**

ಎ) ಜಶ್ತ್ವ ಸಂಧಿ ಬಿ) ಶ್ಚುತ್ವ ಸಂಧಿ

ಸಿ) ಆದೇಶ ಸಂಧಿ ಡಿ) ಯಣ್ ಸಂಧಿ

**ಉತ್ತರ : (ಎ) ಜಶ್ತ್ವ ಸಂಧಿ**

**33. 'ಮಾಡು' ಧಾತುವಿನ ವಿಧ್ಯರ್ಥಕ ರೂಪ.**

ಎ) ಮಾಡಿಯಾನು ಬಿ) ಮಾಡದು

ಸಿ) ಮಾಡೀತು ಡಿ) ಮಾಡಲಿ

**ಉತ್ತರ: (ಡಿ) ಮಾಡಲಿ**

**34. ಸ್ವತಂತ್ರ ವಾಕ್ಯಗಳಾಗಿ ನಿಲ್ಲಬಲ್ಲ ಅನೇಕ ಉಪವಾಕ್ಯಗಳೊಡನೆ ಒಂದು ಪೂರ್ಣಾಭಿಪ್ರಾಯದ ವಾಕ್ಯವಾಗಿದ್ದರೆ ಅದು.**

ಎ) ಸಾಮಾನ್ಯ ವಾಕ್ಯ ಬಿ) ಸಂಯೋಜಿತ ವಾಕ್ಯ

ಸಿ) ಮಿಶ್ರ ವಾಕ್ಯ ಡಿ) ಪ್ರಶ್ನಾರ್ಥಕ ವಾಕ್ಯ

**ಉತ್ತರ: (ಬಿ) ಸಂಯೋಜಿತ ವಾಕ್ಯ**

**35. ಅನ್ವರ್ಥನಾಮಪದಕ್ಕೆ ಉದಾಹರಣೆಯಾದ ಪದವಿದು.**

ಎ) ರಾಹುಲ ಬಿ) ಪರ್ವತ

ಸಿ) ಮನುಷ್ಯ ಡಿ) ವಿಜ್ಞಾನಿ

**ಉತ್ತರ: (ಡಿ) ವಿಜ್ಞಾನಿ**

**36. 'ತತ್ಪುರುಷ ಸಮಾಸಕ್ಕೆ' ಉದಾಹರಣೆಯಾದ ಪದ.**

ಎ) ಬೆಟ್ಟದಾವರೆ ಬಿ) ಮುಕ್ಕಣ್ಣು

ಸಿ) ಅಂಗೈ ಡಿ) ನೆಯ್ದುವಸ್ತ್ರ

**ಉತ್ತರ: (ಎ) ಬೆಟ್ಟದಾವರೆ**

**37. ಪಾರಿಭಾಷಿಕ ಪದಗಳನ್ನು ಬಳಸುವಾಗ, ಅನ್ಯಭಾಷೆಯ ಪದಗಳನ್ನು ಬಳಸುವಾಗ, ಪ್ರಮುಖ ಪದಗಳನ್ನು ಸೂಚಿಸುವಾಗ ಈ ಚಿಹ್ನೆಯನ್ನು ಬಳಸಲಾಗುವುದು.**

ಎ) ಉದ್ಧರಣ ಚಿಹ್ನೆ ಬಿ) ಆವರಣ ಚಿಹ್ನೆ

ಸಿ) ವಾಕ್ಯವೇಷ್ಠನ ಚಿಹ್ನೆ ಡಿ) ವಿವರಣಾತ್ಮಕ ಚಿಹ್ನೆ

**ಉತ್ತರ: (ಸಿ) ವಾಕ್ಯವೇಷ್ಠನ ಚಿಹ್ನೆ**

**38. ಹಲವು ವಸ್ತುಗಳಲ್ಲಿ ಒಂದನ್ನು ನಿಶ್ಚಯವಾಗಿ ಹೇಳುವ ಸಂದರ್ಭದಲ್ಲಿ ಈ ಅವ್ಯಯವನ್ನು ಬಳಸುಲಾಗುತ್ತದೆ.**

ಎ) ಅನುಕರಣಾವ್ಯಯ ಬಿ) ಕ್ರಿಯಾರ್ಥಕಾವ್ಯಯ

ಸಿ) ಸಂಬಂಧಾರ್ಥಕಾವ್ಯಯ ಡಿ) ಅವಧಾರಣಾರ್ಥಕಾವ್ಯಯ

**ಉತ್ತರ: (ಡಿ) ಅವಧಾರಣಾರ್ಥಕಾವ್ಯಯ**

**39. ಸ್ಯಾನಿಟರಿ' ಪದವು ಕನ್ನಡಕ್ಕೆ ಈ ಭಾಷೆಯಿಂದ ಬಂದಿದೆ.**

ಎ) ಹಿಂದೂಸ್ಥಾನಿ ಬಿ) ಇಂಗ್ಲಿಷ್

ಸಿ) ಗ್ರೀಕ್ ಡಿ)ಪೋರ್ಚ್ಗೀಸ್

**ಉತ್ತರ: (ಬಿ) ಇಂಗ್ಲಿಷ್**

**40. ತದ್ಧಿತಾಂತ ಭಾವನಾಮಕ್ಕೆ ಉದಾಹರಣೆಯಾಗುವ ಪದವಿದು.**

ಎ) ಬಳೆಗಾರ ಬಿ) ಚಂದ್ರನಂತೆ

ಸಿ) ಕಪ್ಪು ಡಿ) ಸಿರಿವಂತ

**ಉತ್ತರ: (ಸಿ) ಕಪ್ಪು**

**ಈ ಕೆಳಗಿನವುಗಲ್ಲಿ ಮೊದಲೆರೆಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸರಿ ಹೊಂದುವ ಸಂಬಂಧೀಪದವನ್ನು ಬರೆಯಿರಿ (ಪ್ರತಿ ಸರಿಯುತ್ತರಕ್ಕೆ 1 ಅಂಕ) 4X1=4**

**41. ಹಾಲ್ಜೇನು : ಜೋಡುನುಡಿ :: ಮೊಟ್ಟಮೊದಲು :________**

**ಉತ್ತರ :** ದ್ವಿರುಕ್ತಿ

**42. ವಂಧ್ಯಾ : ಬಂಜೆ :: ಕೋಕಿಲ : ________.**

**ಉತ್ತರ :** ಕೋಗಿಲೆ

**43. ಚಿತ್ತ : ಮನಸ್ಸು :: ಕೈವಾರ :________**

**ಉತ್ತರ:** ಹೊಗಳಿಕೆ

**44. ಸಕ್ಕಾರಿ : ಸಕ್ಕರೆ:: ಇಸವಾಸ ; ________**

**ಉತ್ತರ:** ವಿಶ್ವಾಸ

**45. ಈ ಕೆಳಗಿನ ಪ್ರಸ್ತಾರ ಹಾಕಿ, ಗಣ ವಿಭಾಗಿಸಿ, ಛಂದಸ್ಸನ್ನು ಹೆಸರಿಸಿರಿ : 1X3=3**

| | | | | |
|---|---|---|---|---|
| 3 | 4 | 3 | 4 | |
| U U U | UU - | U U U | U U U U | |
| ಕೊರಳ | ಸೆರೆ | ಹಿಗ್ಗಿದವು | ದೃಗುಜಲ | =14 |

| | | | | |
|---|---|---|---|---|
| 3 | 4 | 3 | 4 | |
| U U U | U U U U | -U | U U - | |
| ಉರವ | ಣಿಸಿಕಡು | ನೊಂದ | ನಕಟಾ | =14 |

| | | | | | | | |
|---|---|---|---|---|---|---|---|
| 3 | 4 | 3 | 4 | 3 | 4 | 2 | |
| U U U | U U - | - U | – UU | – U | U U U U | - | |
| ಕುರುಪ | ತಿಗೆಕೇ | ಡಾದು | ದೆಂದನು | ತನ್ನ | ಮನದೊಳ | ಗೆ॥ | =23 |

ಛಂದಸ್ಸು : ಭಾಮಿನಿ ಷಟ್ಪದಿ

ಅಥವಾ

| | | | |
|---|---|---|---|
| 4 | 4 | 4 | |
| - - | U – U | U U - | |
| ಅಂತೆಂ | ಬನಾರ್ಗೆ | ಪಿರಿದು | =12 |

| | | | | | |
|---|---|---|---|---|---|
| 4 | 4 | 4 | 4 | 4 | |
| -U U | - - | U -U | - - | U U ___ | |
| ಭ್ರಾಂತುದ | ಳೇಂದ್ರೋ | ಣನೆಂಬ | ನೇಂ ಪಾ | ರ್ವನೆ ಪೇ॥ | =20 |

ಛಂದಸ್ಸು : ಕಂದ ಪದ್ಯ

**46. ಈ ಕೆಳಗಿನ ಅಲಂಕಾರವನ್ನು ಹೆಸರಿಸಿ, ಲಕ್ಷಣ ಬರೆದು, ಸಮನ್ವಯ ಮಾಡಿರಿ. 1X3=3**

**"ಭೀಮ ದುರ್ಯೋಧನರು ಮದಗಜಗಳಂತೆ ಹೋರಾಡಿದರು"**

**(4 ನೇ ಪ್ರಶ್ನೋತ್ತರ ಪತ್ರಿಕೆಯಲ್ಲಿ ಬಂದಿರುವ ಪ್ರಶ್ನೆ)**

ಅಥವಾ

**ಮಾತು ಬಲ್ಲವನಿಗೆ ಜಗಳವಿಲ್ಲ ; ಊಟ ಬಲ್ಲವನಿಗೆ ರೋಗವಿಲ್ಲ.**

**ಉತ್ತರ :** ಅಲಂಕಾರದ ಹೆಸರು : ದೃಷ್ಟಾಂತಾಲಂಕಾರ.

**ಲಕ್ಷಣ :** ಎರಡು ಬೇರೆ ಬೇರೆ ವಾಕ್ಯಗಳಲ್ಲಿ ಅರ್ಥ ಸಾದೃಶ್ಯದಿಂದ ಬಿಂಬ – ಪ್ರತಿಬಿಂಬ ಭಾವವು ತೋರಿ ಬಂದರೆ ಅದು ದೃಷ್ಟಾಂತಾಲಂಕಾರ.

**ಸಮನ್ವಯ :** ಉಪಮೇಯ : ಮಾತು ಬಲ್ಲವನಿಗೆ ಜಗಳವಿಲ್ಲ (ಬಿಂಬ)

ಉಪಮಾನ : ಊಟ ಬಲ್ಲವನಿಗೆ ರೋಗವಿಲ್ಲ (ಪ್ರತಿಬಿಂಬ)

ಇಲ್ಲಿ 'ಊಟ ಬಲ್ಲವನಿಗೆ ರೋಗವಿಲ್ಲ' ಎಂಬ ಉಪಮಾನ ವಾಕ್ಯಕ್ಕೂ ' ಮಾತು ಬಲ್ಲವನಿಗೆ ಜಗಳವಿಲ್ಲ ಎಂಬ ಉಪಮೇಯ ವಾಕ್ಯಕ್ಕೂ ಅರ್ಥ ಸಾದೃಶ್ಯದಿಂದ ಪರಸ್ಪರ ಬಿಂಬ – ಪ್ರತಿಬಿಂಬ ಭಾವವು ಕಂಡುಬರುವುದರಿಂದ ಈ ಮೇಲಿನ ಲಕ್ಷ್ಯವು ದೃಷ್ಟಾಂತಾಲಂಕಾರವಾಗಿದೆ.

(ಈ ಅಲಂಕಾರದಲ್ಲಿ ಬಿಂಬ – ಪ್ರತಿಬಿಂಬದ ಅಂಶಗಳು ಅದಲು ಬದಲು ಇರಬಹುದು)

**ವಿಭಾಗ–"ಬಿ" (ಅನ್ವಯಿಕ ವ್ಯಾಕರಣ, ಅಲಂಕಾರ, ಛಂದಸ್ಸು)**

**47. ಈ ಕೆಳಗಿನ ಗಾದೆಯನ್ನು ವಿಸ್ತರಿಸಿ ಬರೆಯಿರಿ. 1X3=3**

* ಹೆತ್ತತಾಯಿ, ಹೊತ್ತನಾಡು ಸ್ವರ್ಗಕ್ಕಿಂತ ಮಿಗಿಲು.
* ಚಿಂತೆಯೇ ಮುಪ್ಪು ; ಸಂತೋಷವೇ ಯೌವನ.
* ದೇಶ ನೋಡು; ಕೋಶ ಓದು.

ಉತ್ತರ : (ವಿಷಯ ಶಿಕ್ಷಕರ ಸಹಾಯದಿಂದ ಅಭ್ಯಾಸ ಮಾಡುವುದು)

**48. ನಿಮ್ಮನ್ನು ಸರಗೂರಿನ ಕಾವೇರಿ ಪ್ರೌಢಶಾಲೆಯ 'ಪ್ರಕೃತಿ' ಎಂದು ಭಾವಿಸಿಕೊಂಡು ನಿಮ್ಮ ಶಾಲೆಯಲ್ಲಿ ಆಚರಿಸಿದ 'ಕನ್ನಡ ರಾಜ್ಯೋತ್ಸವ' ಕಾರ್ಯಕ್ರಮದ ವರದಿಯನ್ನು ಪ್ರಕಟಿಸುವಂತೆ ಕೋರಿ 'ವಿಜಯವಾಣಿ' ದಿನಪತ್ರಿಕೆಯ ಸಂಪಾದಕರಿಗೆ ಒಂದು ಮನವಿ ಪತ್ರ ಬರೆಯಿರಿ.**

ಅಥವಾ

**ನಿಮ್ಮನ್ನು ಮಂಡ್ಯದ ಅನಿಕೇತನ ಪ್ರೌಢಶಾಲೆಯ 'ಪ್ರಾರ್ಥನಾ' ಎಂದು ಭಾವಿಸಿಕೊಂಡು ನಿಮ್ಮ ವಿದ್ಯಾಭ್ಯಾಸದ ಪ್ರಗತಿಯನ್ನು ಕುರಿತು ಭದ್ರಾವತಿಯ ನೇತಾಜಿನಗರದಲ್ಲಿ ವಾಸವಾಗಿರುವ 'ವನಿತ' ಎಂಬ ಹೆಸರಿನ ನಿಮ್ಮ ತಾಯಿಯವರಿಗೆ ಒಂದು ಪತ್ರ ಬರೆಯಿರಿ.**

ಉತ್ತರ : (ವಿಷಯ ಶಿಕ್ಷಕರ ಸಹಾಯದಿಂದ ಅಭ್ಯಾಸ ಮಾಡುವುದು)

**49. ಪ್ರಬಂಧ ಬರವಣಿಗೆ . 1X5= 5**

* ಜನಸಂಖ್ಯಾ ಸ್ಫೋಟಕ್ಕೆ ಕಾರಣ ಹಾಗೂ ಪರಿಹಾರೋಪಾಯ
* ರಾಷ್ಟ್ರೀಯ ಭಾವೈಕ್ಯತೆ
* ಜಾಗತಿಕ ತಾಪಮಾನ ಹೆಚ್ಚಳದಿಂದಾಗುವ ದುಷ್ಪರಿಣಾಮ ಹಾಗೂ ಪರಿಹಾರಗಳು

**ಉತ್ತರ :** (ವಿಷಯ ಶಿಕ್ಷಕರ ಸಹಾಯದಿಂದ ಅಭ್ಯಾಸ ಮಾಡುವುದು)

**ಎಲ್ಲ ಪ್ರಿತಿಯ ವಿದ್ಯಾರ್ಥಿಗಳಿಗೆ ಶುಭವಾಗಲಿ.**

## ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಹೊಸಕೋಟೆ ತಾಲ್ಲೂಕು. ಬೆಂಗಳೂರು ಗ್ರಾಮಾಂತರ ಜಿಲ್ಲೆ

ಪ್ರಶ್ನೋತ್ತರ ಪತ್ರಿಕೆ ಸಂಗ್ರಹ – 03

## ಪ್ರಥಮ ಭಾಷೆ– ಕನ್ನಡ

ಸಮಯ : 3 ಗಂಟೆ 15 ನಿಮಿಷ

10ನೇ ತರಗತಿ

ಒಟ್ಟು ಅಂಕಗಳು : 100

**I. ಕೆಳಗಿನ ಪ್ರಶ್ನೆಗಳಿಗೆ ಅಥವಾ ಅಪೂರ್ಣ ಹೇಳಿಕೆಗಳಿಗೆ ನಾಲ್ಕು ಆಯ್ಕೆಗಳನ್ನು ನೀಡಲಾಗಿದೆ.ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಕ್ರಮಾಕ್ಷರದೊಂದಿಗೆ ಬರೆಯಿರಿ. 6X1=6**

**1 ಒಬ್ಬರು ಹೇಳಿದ ಮಾತನ್ನೇ ಯಥಾವತ್ತಾಗಿ ಬರೆಯುವಾಗ ಈ ಚಿಹ್ನೆಯನ್ನು ಬಳಸಲಾಗುವುದು.**

(ಎ) ಅರ್ಧ ವಿರಾಮ (ಬಿ) ಅಲ್ಪ ವಿರಾಮ

(ಸಿ) ಉದ್ಧರಣ (ಡಿ) ಆವರಣ

**ಉತ್ತರ :–** (ಸಿ)ಉದ್ಧರಣ

**2 'ಅವರೇ' ಪದವು ಈ ಅವ್ಯಯಕ್ಕೆ ಉದಾಹರಣೆಯಾಗಿದೆ.**

(ಎ) ಸಾಮಾನ್ಯಾರ್ಥಕಾವ್ಯಯ

(ಬಿ) ಕ್ರಿಯಾರ್ಥಕಾವ್ಯಾಯ

(ಸಿ)ಸಂಬಂಧಾರ್ಥಕಾವ್ಯಯ

(ಡಿ) ಆವರಧಾರಣಾರ್ಥಕಾವ್ಯಯ

**ಉತ್ತರ :** (ಡಿ)ಅವಧಾರಣಾರ್ಥಕಾವ್ಯಯ

**3 'ಶರಚ್ಚಂದ್ರ ' ಪದವು ಈ ಸಂಧಿಯಾಗಿದೆ.**

(ಎ) ಶ್ಚುತ್ವ (ಬಿ) ಜಶ್ವ (ಸಿ) ವೃದ್ದಿ (ಡಿ) ಯಣ್

**ಉತ್ತರ :**(ಎ) ಶ್ಚುತ್ವ

**4 ತೃತೀಯಾ ವಿಭಕ್ತಿಯ ಕಾರಕಾರ್ಥ**

(ಎ) ಕರ್ತ್ರಾರ್ಥ (ಬಿ)ಕರಣಾರ್ಥ

(ಸಿ) ಅಪಾದಾನ (ಡಿ) ಸಂಪ್ರದಾನ

**ಉತ್ತರ :** (ಬಿ)ಕರಣಾರ್ಥ

**5. ಸಂಭಾವನಾರ್ಥಕ ಕ್ರಿಯಾರೂಪಕ್ಕೆ ಉದಾಹರಣೆಯಾಗಿರುವ ಪದ.**

(ಎ)ಮಾಡೋಣ (ಬಿ)ಮಾಡನು

(ಸಿ) ಮಾಡಿಯಾನು (ಡಿ) ಮಾಡಲಿ

**ಉತ್ತರ :** (ಸಿ) ಮಾಡಿಯಾನು

**6. 'ರಸ್ತೆ ' ಪದವು ಕನ್ನಡಕ್ಕೆ ಈ ಭಾಷೆಯಿಂದ ಬಂದಿದೆ**

(ಎ)ಹಿಂದೂಸ್ಥಾನಿ (ಬಿ)ಪೋರ್ಚುಗೀಸ್

(ಸಿ) ಅರಬ್ಬೀ (ಡಿ) ಫಾರ್ಸಿ

**ಉತ್ತರ :** (ಡಿ) ಫಾರ್ಸಿ

**II. ಕೆಳಗಿನವುಗಳಲ್ಲಿ ಮೊದಲೆರೆಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸರಿಹೊಂದುವ ಸಂಬಂಧೀ ಪದವನ್ನು ಬರೆಯಿರಿ. 4X1=4**

**7. ಮುರಾರಿ : ಕೃಷ್ಣ :: ರಾಜೀವ ಸಖ : ______**

**ಉತ್ತರ :** ಸೂರ್ಯ

**8. ವಂಧ್ಯಾ : ಬಂಜೆ :: ದೃಷ್ಟಿ : ______**

**ಉತ್ತರ :** ದಿಟ್ಟಿ

**9. ಇಮ್ಮಾವು : ಕರ್ಮದಾರೆಯ ಸಮಾಸ :: ಹಿಂದಲೆ : ______**

**ಉತ್ತರ :** ಅಂಶಿ ಸಮಾಸ

**10. ಕನ್ನಡಿಗ : ತದ್ದಿತಾಂತನಾಮ :: ಪೆರ್ಮೆ : ______**

**ಉತ್ತರ :** ತದ್ದಿತಾಂತ ಭಾವನಾಮ

**III. ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ. 7X1=7**

**11. ಸೇನೆಯಲ್ಲಿದ್ದ ವೈದ್ಯನ ಹೆಸರೇನು ?**

**ಉತ್ತರ :** ಸೇನೆಯಲ್ಲಿದ್ದ ವೈದ್ಯನ ಹೆಸರು ರಾಹಿಲ.

**12. ರಾಮನ ಬರುವಿಕೆಗಾಗಿ ಮತಂಗಾಶ್ರಮದಲ್ಲಿ ಕಾಯುತ್ತಿದ್ದವರು ಯಾರು ?**

**ಉತ್ತರ :** ರಾಮನ ಬರುವಿಕೆಗಾಗಿ ಮತಂಗಾಶ್ರಮದಲ್ಲಿ ಕಾಯುತ್ತಿದ್ದವರು ಶಬರಿ

**13. ವಿಶ್ವೇಶ್ವರಯ್ಯ ಅವರನ್ನು ದಿವಾನರಾಗಿ ನೇಮಿಸಿದವರು ಯಾರು ?**

**ಉತ್ತರ :** ವಿಶ್ವೇಶ್ವರಯ್ಯ ಅವರನ್ನು ದಿವಾನರಾಗಿ ನೇಮಿಸಿದವರು ನಾಲ್ವಡಿ ಕೃಷ್ಣರಾಜ ಒಡೆಯರು

**14. ಸುಕುಮಾರ ಸ್ವಾಮಿಯ ತಂದೆ–ತಾಯಿಯ ಹೆಸರೇನು ?**

**ಉತ್ತರ :** ಸುಕುಮಾರ ಸ್ವಾಮಿಯ ತಂದೆಯ ಹೆಸರು ಇಂದ್ರದತ್ತ ತಾಯಿಯ ಹೆಸರು ಗುಣಮತಿ.

**15. ಹಕ್ಕಿಯ ಗರಿಯಲ್ಲಿ ಯಾವ ಬಣ್ಣಗಳಿವೆ ?**

**ಉತ್ತರ :** ಹಕ್ಕಿಯ ಗರಿಯಲ್ಲಿ ಬಿಳಿ ಹಾಗು ಹೊಳೆಯುವ ಬಣ್ಣಗಳಿವೆ.

**16. ದುರ್ಯೋಧನ ತಾನು ಹೋರಾಡುತ್ತಿರುವುದು ಏಕೆ ಎಂದು ಭೀಷ್ಮನಿಗೆ ಹೇಳುತ್ತಾನೆ ?**

**ಉತ್ತರ :** ದುರ್ಯೋಧನ ತಾನು ಹೋರಾಡುತ್ತಿರುವುದು ಛಲಕ್ಕಾಗಿ ಎಂದು ಭೀಷ್ಮನಿಗೆ ಹೇಳುತ್ತಾನೆ ?

**17. ಭಗತ್ ಸಿಂಗ್ ಬ್ರಿಟಿಷರ ವಿರುದ್ಧ ಸೇಡು ತೀರಿಸಿಕೊಂಡಿದ್ದಕ್ಕೆ ದೊರೆತ ಫಲವೇನು .**

**ಉತ್ತರ :** ಭಗತ್ ಸಿಂಗ್ ಬ್ರಿಟಿಷರ ವಿರುದ್ಧ ಸೇಡು ತೀರಿಸಿಕೊಂಡಿದ್ದಕ್ಕೆ ದೊರೆತ ಫಲ ಮರಣದಂಡನೆ

**IV. ಕೆಳಗಿನ ಪ್ರಶ್ನೆಗಳಿಗೆ ಮೂರು– ನಾಲ್ಕು ವಾಕ್ಯದಲ್ಲಿ ಉತ್ತರ ಬರೆಯಿರಿ. 10X2=20**

**18. ಮುದುಕಿಯು ಸೈನಿಕರಿಂದ ರಾಹಿಲನನ್ನು ಹೇಗೆ ರಕ್ಷಿಸಿದಳು ?**

**ಉತ್ತರ :** 'ಬಾಗಿಲು ತೆಗೆಯಿರಿ 'ಎಂಬ ಗರ್ಜನೆಯ ಧ್ವನಿಕೇಳಿದ ಮುದುಕಿ ನಿತ್ಯ ನಿಶ್ಯಬ್ಧವಾಗಿ ರಾಹಿಲನನ್ನು ಸೊಸೆ ಮಲಗಿದ ಕೋಣೆಗೆ ಕಳುಹಿಸಿ ಮಂಚದಡಿಯನ್ನು ತೋರಿಸಿದಳು.ಬಾಗಿಲು ತೆರೆದಗ ಒಳ ನುಗ್ಗಿದ ಸೈನಿಕರು ಯಾರಾದರೂ ಗಾಯಗೊಂಡ ಸೈನಿಕರು ಯಾರಾದರೂ ಬಂದಿದ್ದಾರೆಯೆ? ಎಂದು ಹುಡುಕಲು ಮುಂದಾದಾಗ ನನ್ನ ಮೊಮ್ಮಗುವಿನ ಹೆಣವಿದೆ,ಅದನ್ನು ನೋಡಿಯಾರಿಗಾಗಿ,ಯಾತಕ್ಕಾಗಿ ಈ ಯುದ್ಧ? ಅದನ್ನಾದರು ಹೇಳಿರಿ. ಈ ಯುದ್ದ ನನ್ನ ಮ್ಮೊಮ್ಮಗುವನ್ನು ಉಳಿಸಲಿಲ್ಲ ಎಂದು ನಿರ್ಜೀವವಾದ ಮಗುವಿನ ಬಳಿ ಕುಳಿತು ಎದೆ ಬಡಿದುಕೊಂಡು ಅಳುತ್ತಾಳೆ. ಬಂದವರು ಮಗುವಿನ ಶವವನ್ನು ನೋಡಿದರು. ಕೋಣೆಯಿಂದ ಬರುತ್ತಿದ್ದ ಹಸಿ ನೆತ್ತರ ವಾಸನೆ ಮೂಗಿಗೆ ಬಡಿಯಿತು.ಬಂದ ಎಲ್ಲಾ ಸೈನಿಕರು ನಿಶಬ್ಧವಾಗಿ ಹಿಂದಿರುಗಿದರು. ಹೀಗೆ ಮುದುಕಿ ರಾಹಿಲನನ್ನು ಸೈನಿಕರಿಂದ ರಕ್ಷಿಸಿದಳು.

**19. ರಾಮಲಕ್ಷ್ಮಣರನ್ನು ಶಬರಿ ಹೇಗೆ ಸತ್ಕರಿಸುತ್ತಾಳೆ ?**

**ಉತ್ತರ :** ರಾಮ ಬಂದು ನಿಂತಿರುವುದನ್ನು ಕಂಡು ಆಶ್ಚರ್ಯಗೊಳ್ಳುತ್ತಾಳೆ. ಸಮೀಪಕ್ಕೆ ಹೋಗಿ ಆತನ ಮೈಮುಟ್ಟಿ ಪಾದಗಳಿಗೆ ನಮಸ್ಕರಿಸಿ ಕೈಗಳನ್ನು ಕಣ್ಣಿಗೆ ಒತ್ತಿಕೊಂಡು ಆನಂದಭಾಷ್ಪ ಸುರಿಸುತ್ತಾಳೆ. ಅಯ್ಯೋ, ಇಂದು ಏನು ಸಿದ್ದತೆ ಮಾಡಿಕೊಂಡಿಲ್ಲ ನಿನ್ನೆಯಷ್ಟು ಚೆನ್ನವಿಲ್ಲ ಎನ್ನುತ್ತಾ ವನಮಾಲೆಯನ್ನು ಕೊರಳಿಗೆ ಹಾಕಿ ಹಿಗ್ಗುತ್ತಾಳೆ .ಇದರಷ್ಟು ರುಚಿಕರವಾದ ಹಣ್ಣೇ ಜಗತ್ತಿನಲ್ಲಿ ಇಲ್ಲ ಎಂದು ತಾನೆ ಅವರ ಕೈಯಲ್ಲಿಟ್ಟು ರಾಮಲಕ್ಷ್ಮಣರನ್ನು ಸತ್ಕರಿಸುತ್ತಾಳೆ.

**20. ರಾಜರ ಪ್ರಕೃತಿ ಹೇಗಿರುತ್ತದೆ ?**

**ಉತ್ತರ :** ರಾಜರ ಪ್ರಕೃತಿಯೇ ಹಾಗೆ , ಅಹಂಕಾರದ ದಾಹಜ್ವರ ತಲೆಗಡವಿ ಅವರ ಬಗೆಯಲ್ಲಿ ಕತ್ತಲು ತುಂಬಿರುತ್ತದೆ. ಇದು ಎಲ್ಲಾ ದುಡ್ಡಿನ ಮಹಿಮೆ, ದುಡ್ಡು ದುರಭಿಮಾನದ ತವರು, ದುಡ್ಡಿನ ಪೈತ್ಯ ಅಡರಿವಿದವರಿಗೆ ಜಗತ್ತೆಲ್ಲ ಕ್ಷುದ್ರವಾಗಿ ಕಾಣುತ್ತದೆ, ರಾಜ್ಯ ಎನ್ನುವುದು ಒಂದು ವಿಷ, ಅದರ ಅಧಿಕಾರದ ಸೋಂಕು ತಾಗಿದವರಿಗೆಲ್ಲ ಬುದ್ಧಿ ಮಂಕಾಗಿ ಬಿಡುತ್ತದೆ.

**21. ಗುರೂಪದೇಶದ ಗುಣಗಳನ್ನು ಪಟ್ಟಿ ಮಾಡಿ.**

**ಉತ್ತರ :** ಗುರೂಪದೇಶ ಎಂದರೆ ಜನರ ಒಳಹೊರಗಣ ಕೊಳೆಗಳನ್ನು ತೊಳೆದು ಬಿಡುವ ನೀರಿಲ್ಲದ 'ಮೀಹ' ತಲೆ ನೆರೆಯದೆ.ಮೈಸುಕ್ಕುಗಟ್ಟದೆ ಮೂಡುವ ಮುಪ್ಪು, ಬೊಜ್ಜು ಬೆಳೆಯದೆ ಬರುವ ಗುರುತ್ವ, ಬಂಗಾರವಿಲ್ಲದೆ ಮಾಡಿದ ಬೆಲೆಬಾಳುವ ಕಿವಿಯೋಲೆ, ಪಂಜು ಇಲ್ಲದೆ ಬೆಳಗುವ ಬೆಳಕು,ಉದ್ವೇಗ ಬರಿಸದ ಜಾಗರಣೆ.

**22 'ಮೇಧಿನಿ ಪತಿ ನೀನು ' ಎಂದು ಕೃಷ್ಣನು ಕರ್ಣನ ಮನದಲ್ಲಿ ಹೇಗೆ ಭಯವನ್ನು ಬಿತ್ತಿದನು ?**

**ಉತ್ತರ :** ಕೃಷ್ಣ ಸಂಧಾನವು ದುರ್ಯೋಧನನ ಹಠದಿಂದ ವಿಫಲವಾಗಿರುತ್ತದೆ.ಕರ್ಣನ ಬಳಿಗೆ ಬಂದ ಧರ್ಮ ಪಕ್ಷಪಾತಿಯಾದ ಕೃಷ್ಣನು ಕರ್ಣನನ್ನು ತನ್ನ ರಥದ ಪೀಠದಲ್ಲಿ ಕುಳ್ಳಿರಿಸಿಕೊಂಡು "ನಿಮ್ಮಲ್ಲಿ ಯಾದವರು ಮತ್ತು ಕೌರವರಲ್ಲಿ ಯಾವುದೇ ಭೇಧವಿಲ್ಲ.ಸರಿಯಾಗಿ ವಿಚಾರಿಸಿ ನೋಡಿದರೆ ಈ ಎರಡು ವಂಶಗಳಲ್ಲಿ ಮೊದಲು ಮತ್ತು ಎರಡು ಎಂಬುದಿಲ್ಲ. ಈ ಭೂಮಿಗೆ ನೀನೇ ನಿಜವಾದ ಒಡೆಯನಾಗಬೇಕು. ಇದು ನಿನ್ನ ಅರಿವಿಗೆ ಬಂದಿಲ್ಲವಷ್ಟೆ" ಎಂದು ಕೃಷ್ಣನು ಕರ್ಣನ ಮನದಲ್ಲಿ ಭಯವನ್ನು ಬಿತ್ತಿದನು.

**23. ಅಂತಕಾತ್ಮಜನೊಂದಿಗೆ ಸಂಧಿ ಮಾಡಿಕೊಳ್ಳುವುದಾಗಿ ದುರ್ಯೋಧನ ಹೇಳಲು ಕಾರಣವೇನು?**

**ಉತ್ತರ ;** ಪಾಂಡವರೊಂದಿಗೆ ಸಂಧಿಮಾಡಿಕೊಂಡು ಬದುಕ ಬೇಕೆಂಬ ಸಲಹೆಯನ್ನು ಭೀಷ್ಮನು ದುರ್ಯೊಧನನಿಗೆ ನೀಡುತ್ತಾನೆ.ಆದರೆ ದುಯೋಧನ ಇದಕ್ಕೆ ಒಪ್ಪದೆ ನನ್ನ ಪ್ರಿಯ ಗೆಳೆಯ ಕರ್ಣನನ್ನು ಕೊಂದ ಅರ್ಜುನ,ನನ್ನ ಪ್ರೀತಿಯ ತಮ್ಮ ದುಶ್ಯಾಸನನ್ನು ಕೊಂದ ಭೀಮ, ಇವರಿಬ್ಬರು ಬದುಕಿರುವವರೆಗೆ ಸಂಧಿ ಸಾದ್ಯವಿಲ್ಲ.ಮೊದಲು ಪಾರ್ಥ–ಭೀಮರನ್ನು ಕೊಂದು ಬಳಿಕ ನನ್ನ ದುಃಖ ಕಡಿಮೆಯಾದ ಮೇಲೆ ನಿನ್ನ ಸಲಹೆಯಂತೆ ಅಂತಕಾತ್ಮಜನೊಂದಿಗೆ ಸಂಧಿ ಮಾಡಿಕೊಳ್ಳವುದಾಗಿ ಹೇಳುತ್ತಾನೆ.

**24. ಬಾಳಿನಲ್ಲಿ ತೃಪ್ತಿ ದೊರಕಬೇಕಾದರೆ ಏನು ಮಾಡಬೇಕೆಂಬುದು ವಿವೇಕಾನಂದರ ಅಭಿಪ್ರಾಯ ?**

**ಉತ್ತರ :** ನಮ್ಮ ದೇಶದ ಮತ್ತು ಇಡಿಯ ಜಗತ್ತಿನ ಕಲ್ಯಾಣ ನಮ್ಮ ಮೇಲೆಯೇ ನಿಂತಿದೆ ಎಂದು ಭಾವಿಸಿ ಕಾರ್ಯೋನ್ಮುಖರಾಗಬೇಕು ,ವೇದಾಂತದ ಸಂದೇಶವನ್ನು ಪ್ರತಿ ಮನೆಗೂ ಸಾರಿ,ಪ್ರತಿಯೊಂದು ಆತ್ಮದಲ್ಲಿರುವ ಸುಪ್ತ ಪಾವಿತ್ರ್ಯವನ್ನು ಜಾಗೃತಗೊಳಿಸಿ , ಅನಂತರ ನಾವು ಎಷ್ಟೇ ಅಲ್ಪವನ್ನು ಸಾಧಿಸಿದ್ದರೂ ಒಂದು ಮಹಾ ಆದರ್ಶಕ್ಕಾಗಿ ಬಾಳಿ ದುಡಿದು ಮಡಿದೆವು ಎಂಬ ತೃಪ್ತಿಯಾದರೂ ಇರುತ್ತದೆ.ಎಂದು ವಿವೇಕಾನಂದರು ಹೇಳಿರುತ್ತಾರೆ.

**25. 'ವಸಂತ ಮುಖ ತೋರಲಿಲ್ಲ' ಕವನದಲ್ಲಿ ಪ್ರಕೃತಿಯ ಸಂಭ್ರಮ ಹೇಗೆ ವ್ಯಕ್ತವಾಗಿದೆ.? (2022,2023)**

**ಉತ್ತರ:** ಒಡೆಯನ ಅಂಗಳದಲ್ಲಿ ಮಾವಿನ ಮರಗಳು ಮೈತುಂಬಿ ನಿಂತಿವೆ. ಹಕ್ಕಿಗಳು ಸ್ವಚ್ಚಂದವಾಗಿ ರೆಕ್ಕೆ ಬಿಚ್ಚಿಹಾರಡುತ್ತವೆ. ಕೋಗಿಲೆಗಳು ಯಾರ ಹಂಗಿಲ್ಲದೆ, ಯಾವುದೇ ಅಡೆತಡೆಯಿಲ್ಲದೆ ಮನತುಂಬಿ ಹಾಡುತ್ತಿವೆ.ಕಡಲುಗಳು ಉಕ್ಕಿ ಅಲೆಗಳು ಭೂಮಿಗೆ ಬಂದು ಅಪ್ಪಳಿಸುತ್ತ ಸಂಭ್ರಮಿಸುತ್ತಿವೆ ಎಂದು'ವಸಂತ ಮುಖ ತೋರಲಿಲ್ಲ' ಕವನದಲ್ಲಿ ಪ್ರಕೃತಿಯ ಸಂಭ್ರಮ ಹೀಗೆ ವ್ಯಕ್ತವಾಗಿದೆ.

**26. ಯಾವ ಯಾವ ವಸ್ತುಗಳನ್ನು ಬಳಸಬೇಡಿರಿ ಎಂದು ಜನಾಂದೋಲನ ಮಾಡಲಾಯಿತು ?**

**ಉತ್ತರ:** ಬಣ್ಣದ ಕಾಗದ, ಗಾಜಿನ ಮಣಿಗಳು, ಬೇಗಡಿ, ಇಮಿಟೇಷನ್ ಮುತ್ತು ತುರಾಯಿಗಳು,ಪಟಾಕಿ,ಢಣಾಕಿ,ನೆಲಗುಮ್ಮ ಮುಂತಾದ ವಸ್ತುಗಳು ವಿದೇಶಿ ಎಂದು ಮಾರಲ್ಪಡುವ ಪರದೇಶಿ ಅತ್ತರುಗಳು ಮೊದಲಾದವುಗಳನ್ನು ಬಳಸಬೇಡಿರೆಂದು ಜನಾಂದೋಲನ ಮಾಡಲಾಯಿತು.

**27. ಹಾಡು ಕಿವಿಗೆ ಬಿದ್ದಾಗ ಪೈಗಳು ಏನು ಮಾಡಿದರು?**

**ಉತ್ತರ:** ಚಪ್ಪರದ ಗದ್ದಲದ ಮದ್ಯೆ ಕುಗ್ಗಿದ ಕೊರಳಲ್ಲಿ

ಹಾಡು ಕೇಳಿಸಿಕೊಂಡ ಪೈಗಳಿಗೆ ಏನಯಿತೋ ಏನು ತೋಚಿತೋ ದೇವರೇಬಲ್ಲ.ಮತ್ತೆ ಚಪ್ಪರದ ಗವುಜು ಅವರಿಗೆ ಕೇಳಲಿಲ್ಲ.ನೆಟ್ಟಗೆ ಹೋದರು ಅಭ್ಯಾಸದ ಪುಸ್ತಕವನ್ನು ಹಿಡಿದರು.ಬರೆಯತೊಡಗಿದರು.ಏಕಂಕ ನಾಟಕ ಎನ್ನಬಹುದಾದ ನಾಟಕವನ್ನು ಇಳಿಹೊತ್ತಿನೊಳಗೆ ಬರೆದು ಮುಗಿಸಿದರು.

**V. ಕೆಳಗಿನ ಕವಿಗಳ/ಸಾಹಿತಿಗಳ ಜನ್ಮಸ್ಥಳ, ಕಾಲ, ಕೃತಿ ಮತ್ತು ಬಿರುದು /ಪ್ರಶಸ್ತಿಗಳನ್ನು ಕುರಿತು ವಾಕ್ಯ ರೂಪದಲ್ಲಿ ಬರೆಯಿರಿ. 2X3=6**

**28. ಶಿವಕೋಟ್ಯಾಚಾರ್ಯ**

**ಉತ್ತರ:** ಶಿವಕೋಟ್ಯಾಚಾರ್ಯ ಕನ್ನಡದ ಪ್ರಥಮ ಗದ್ಯಕೃತಿ 'ವಡ್ಡಾರಾಧನೆ'ಯ ಕರ್ತೃ.ಇವನ ಕಾಲ ಸಾ.ಶ, ಸುಮಾರು 10ನೇ ಶತಮಾನ . ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಕೋಗಳಿ ನಾಡಿನವನು.ಜೈನ ಧಾರ್ಮಿಕ ಕಥೆಗಳ ಸಂಗ್ರಹವದ ವಡ್ಡಾರಾಧನೆಯಲ್ಲಿ 19 ಕಥೆಗಳಿವೆ.ಈ ಕಥೆಗಳ ನಾಯಕರೆಲ್ಲ ಧರ್ಮ ವೀರರು, ಕೆಲವರು ಮೋಕ್ಷವನ್ನು ಸಂಪಾದಿಸಿಕೊಳ್ಳುತ್ತಾರೆ.ಕೆಲವರು ಮೋಕ್ಷಕ್ಕೆ ನೆರೆಮನೆಯಾದ ಸರ್ವಾರ್ಥಸಿದ್ದಿ ಎಂಬ ಸ್ವರ್ಗಕ್ಕೆ ಹೋಗುತ್ತಾರೆ.ಪುಣ್ಯ-ಪಾಪ ರೂಪವಾದ ಕರ್ಮ ಕ್ಷಯದಿಂದ ಸಿದ್ಧಿಗಳು ಉಂಟಾಗುತ್ತವೆ. ಕರ್ಮ ಕ್ಷಯವು ತಪಸ್ಸಿನಿಂದ ಮಾತ್ರ ಸಾಧ್ಯ ಎಂಬ ಸಂದೇಶವನ್ನು ಈ ಕಥೆಗಳು ಸಾರುತ್ತವೆ.

**28. ಕುವೆಂಪು**

**ಉತ್ತರ:** ಕುವೆಂಪು ಕಾವ್ಯನಾಮದಿಂದ ಪ್ರಸಿದ್ಧರಾದ ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ ಅವರು ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ಸಮೀಪದ ಕುಪ್ಪಳ್ಳಿಯವರು. ಇವರು 1904 ಡಿಸೆಂಬರ್ 29 ರಂದು ಜನಿಸಿದರು. ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯು ಕೃತಿ ರಚಿಸಿದ್ದಾರೆ.ಕೊಳಲು, ಪಾಂಚಜನ್ಯ ,ಪ್ರೇಮಕಾಶ್ಮೀರ ,ಪಕ್ಷಿಕಾಶಿ – ಕವನಸಂಕಲನಗಳು.ನನ್ನದೇವರು ಮತ್ತು ಇತರ ಕಥೆಗಳು, ಸನ್ಯಾಸಿ ಮತ್ತು ಇತರ ಕಥೆಗಳು –ಕಥಾಸಂಕಲನಗಳು. ಕಾನೂರು ಹೆಗ್ಗಡತಿ,ಮಲೆಗಳಲ್ಲಿ ಮದುಮಗಳು– ಕಾದಂಬರಿಗಳು.ತಪೋನಂದನ, ರಸೋವೈಸಃ– ವಿಮರ್ಶಾ ಸಂಕಲನಗಳು. ಯಮನಸೋಲು,ಬೆರಳ್ಗೆ ಕೊರಳ್ – ನಾಟಕಗಳು.ನೆನಪಿನದೋಣಿಯಲ್ಲಿ– ಆತ್ಮಕಥನ ಮುಂತಾದ ಸುಮಾರು ಎಪ್ಪತ್ತು ಕೃತಿಗಳನ್ನು ರಚಿಸಿದ್ದಾರೆ. ಶ್ರೀರಾಮಾಯಣ ದರ್ಶನಂ ಮಹಾ ಕಾವ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಮತ್ತು 1968ರಲ್ಲಿ ಭಾರತಿಯ ಜ್ಞಾನಪೀಠ ಪ್ರಶಸ್ತಿ ಲಭಿಸಿದೆ.1964ರಲ್ಲಿ ರಾಷ್ಟ್ರಕವಿ ಪ್ರಶಸ್ತಿ, ಪಂಪ ಪ್ರಶಸ್ತಿ, ಪದ್ಮವಿಭೂಷಣ,1992ರಲ್ಲಿ ಕರ್ನಾಟಕ ರತ್ನ , ಮತ್ತು ಹಲವು ಗೌರವ ಡಾಕ್ಟರೇಟ್ ಮುಂತಾದ ಪ್ರಶಸ್ತಿಗಳು ಲಭಿಸಿವೆ.

**VI. ಕೆಳಗಿನ ಪದ್ಯ ಭಾಗಕ್ಕೆ ಪ್ರಸ್ತಾರ ಹಾಕಿ, ಗಣ ವಿಭಾಗ ಮಾಡಿ, ಛಂದಸ್ಸಿನ ಹೆಸರನ್ನು ಬರೆಯಿರಿ 1X3=3**

**30. ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿ ದೇಶದೊಳ್**

| ಭ | ರ | ನ | ಭ | ಭ | ರ | ಲ+ಗು |
|---|---|---|---|---|---|---|
| -UU | - U - | UUU | - UU | - UU | - U - | U - |
| ಕೋಗಿಲೆ | ಯಾಗಿ ಪು | ಟ್ಟುವುದು | ನಂದನ | ದೊಳ್ ವನ | ವಾಸಿದೇ | ಶದೊಳ್ |

ಇದು ಅಕ್ಷರಗಣ ಛಂದಸ್ಸಿನ 'ಉತ್ಪಲಮಾಲಾವೃತ್ತ 'ದಲ್ಲಿ ರಚಿತವಾಗಿದೆ.

**VII. ಕೆಳಗಿನ ವಾಕ್ಯದಲ್ಲಿರುವ ಅಲಂಕಾರವನ್ನು ಹೆಸರಿಸಿ, ಲಕ್ಷಣ ಬರೆದು ಸಮನ್ವಯಗೊಳಿಸಿ. 1X3=3**

**31. ರಾಮ ಲಕ್ಷ್ಮಣರು ಅಶ್ವಿನಿ ದೇವತೆಗಳಂತೆ ಶೋಭಿಸುತ್ತಿದ್ದರು.**

**ಉತ್ತರ:** ಅಲಂಕಾರದ ಹೆಸರು:– ಉಪಮಾಲಂಕಾರ

**ಲಕ್ಷಣ :** ಎರಡು ವಸ್ತುಗಳಿಗೆ ಪರಸ್ಪರವಾಗಿ ಇರುವ ಹೋಲಿಕೆಯನ್ನು ಹೇಳುವುದೇ ಉಪಮಾಲಂಕಾರ.

ಸಮನ್ವಯ : ಉಪಮೇಯ : ರಾಮಲಕ್ಷ್ಮಣರು

ಉಪಮಾನ : ಅಶ್ವಿನಿ ದೇವತೆಗಳು

ಉಪಮವಾಚಕ ಪದ : ಅಂತೆ

ಸಮಾನ ಧರ್ಮ : ಶೋಬಿಸು

ಇಲ್ಲಿ ಉಪಮೇಯವಾದ ರಾಮ ಲಕ್ಷ್ಮಣರನ್ನು ಉಪಮಾನವಾದ ಅಶ್ವಿನಿ ದೇವತೆಗಳಿಗೆ ಹೋಲಿಸಲಾಗಿದೆ, 'ಅಂತೆ' ಎಂಬ ಉಪಮವಾಚಕ ಪದವಿದ್ದು, **"ಶೋಭಿಸು"** ಎಂಬ ಸಮಾನ ಧರ್ಮ ಇರುವುದರಿಂದ ಪೂರ್ಣೋಪಮಾಲಂಕಾರ (ಉಪಮಾಲಂಕಾರ)ದ ಲಕ್ಷ್ಯವಾಗಿದೆ.

**VIII. ಕೆಳಗಿನ ಗಾದೆಗಳಲ್ಲಿ ಯಾವುದಾದರು ಒಂದನ್ನು ಗಾದೆಯ ಮಹತ್ವದೊಂದಿಗೆ ವಿಸ್ತರಿಸಿ ಬರೆಯಿರಿ 1X3=3**

**32. ಬೆಳೆಯುವ ಸಿರಿ ಮೊಳಕೆಯಲ್ಲಿ ಅಥವಾ ಮಿಂಚಿಹೋದ ಕಾಲಕ್ಕೆ ಚಿಂತಿಸಿ ಫಲವಿಲ್ಲ (ವಿಷಯ ಶಿಕ್ಷಕರ ಸಹಾಯದಿಂದ ಅಬ್ಯಾಸ ಮಾಡುವುದು)**

**IX. ಕೆಳಗಿನ ವಾಕ್ಯ ಅಥವಾ ಹೇಳಿಕೆಗೆ ಸಂದರ್ಭ ಮತ್ತು ಸ್ವಾರಸ್ಯಗಳನ್ನು ಬರೆಯಿರಿ. 6X3=18**

**33. 'ಮೈಸೂರು ಗ್ರಾಮ ನ್ಯಾಯಾಲಯ ಕಾಯ್ದೆ'**

**ಉತ್ತರ :** ಪ್ರಸ್ತುತ ವಾಕ್ಯವನ್ನು ಡಿ.ಎಸ್, ಜಯಪ್ಪ ಗೌಡ ರವರು ರಚಿಸಿರುವ ' ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಕಾರ್ಯ ಸಾಧನೆಗಳು' ಎಂಬ ಕೃತಿಯಿಂದ ಆಯ್ದ 'ಭಾಗ್ಯ ಶಿಲ್ಪಿಗಳು' ಎಂಬ ಗದ್ಯ ಪಾತದಿಂದ ಆರಿಸಲಾಗಿದೆ.

**ಸಂಧರ್ಭ;** ನಾಲ್ವಡಿ ಕೃಷ್ಣರಾಜ ಒಡೆಯರ ಅವಧಿಯಲ್ಲಿ ದಿವಾನರಾಗಿದ್ದ ಸರ್ ಕೆ.ಶೇಷಾದ್ರಿ ಅಯ್ಯರ್ ರವರ ಸಹಕಾರದಿಂದ ಆಡಳಿತದಲ್ಲಿ ಹೊಸ ಬದಲಾವಣೆಗಳನ್ನು ತಂದರು.ಆಡಳಿತ ವಿಕೇಂದ್ರೀಕರಿಸಿದರು.ಅನೇಕ ಕ್ಷೆತ್ರಗಳನ್ನು ಸ್ವಯಂ ಆಡಳಿತ ಕ್ಷೇತ್ರಗಳಾಗಿಸಿ,ಹಲವಾರು ಸಾಮಾಜಿಕ ಕಾನೂನುಗಳನ್ನು ಜಾರಿಗೆ ತಂದರು.ಅವುಗಳಲ್ಲಿ ದೇವದಾಸಿ ಪದ್ದತಿ ನಿಷೇಧ,ಗೆಜ್ಜೆ ಪೂಜೆ ಪದ್ದತಿ ನಿಷೇಧ, ಸ್ತ್ರೀಯರಿಗೆ ಕಡ್ಡಾಯ ಶಿಕ್ಷಣ,ಸ್ತ್ರೀಯರಿಗೆ ಮತದಾನದ ಹಕ್ಕು ಇತ್ಯಾದಿ ಕಾಯ್ದೆಗಳೊಂದಿಗೆ ಮೇಲಿನ ಕಾಯ್ದೆ ಜಾರಿಗೆ ತಂದರು ಎಂದು ಹೇಳುವ ಸಂಧರ್ಭದಲ್ಲಿ ಲೇಖಕರು ಓದುಗರಿಗೆ ಹೇಳಿದ್ದಾರೆ.

**ಸ್ವಾರಸ್ಯ;** ಸಾಮಾಜಿಕ ಕಳಕಳಿ, ಸಂಸ್ಥಾನದ ಸರ್ವತೋಮುಖ ಏಳಿಗೆ,ಅಭಿವೃದ್ಧಿಯ ದೂರದೃಷ್ಟಿ ವ್ಯಕ್ತಿತ್ವ ವಿಕಸನ,ಸಾಮಾನ್ಯ ಜನರ ಕಲ್ಯಾಣದಿಂದ ಮಾತ್ರ ಅಭಿವೃದ್ಧಿ ಸಾಧ್ಯ ಎಂಬುದು

ಸ್ವಾರಸ್ಯಪೂರ್ಣವಾಗಿ ವ್ಯಕ್ತವಾಗಿದೆ.

**34. "ನಿನ್ನ ಪಳುವಗೆ ನಮ್ಮ ಕುಲಮನೆಲ್ಲಮನಳಿವ ಬಗೆ"**

**ಉತ್ತರ** : ಪ್ರಸ್ತುತ ವಾಕ್ಯವನ್ನು ದುರ್ಗಸಿಂಹ ಕವಿ ರವರು ರಚಿಸಿರುವ ' ಕರ್ನಾಟಕ ಪಂಚ ತಂತ್ರಂ' ಎಂಬ ಕೃತಿಯಿಂದ ಆಯ್ದ 'ವೃಕ್ಷ ಸಾಕ್ಷಿ' ಎಂಬ ಗದ್ಯ ಪಾಠದಿಂದ ಆರಿಸಲಾಗಿದೆ.

**ಸಂದರ್ಭ;** ದುಷ್ಟಬುದ್ಧಿ ಧರ್ಮಾಧಿಕರಣರ ಮುಂದೆ ಧರ್ಮ ಬುದ್ಧಿಯೇ ಹೊನ್ನನ್ನು ಕದ್ದಿರುವುದಕ್ಕೆ ಅಲ್ಲಿರುವ ವಟವೃಕ್ಷವೇ ಸಾಕ್ಷಿ ಎಂದು ನುಡಿದಾಗ,ಮರುದಿನ ಸಾಕ್ಷಿ ಹೇಳುವುದಾಗಿ ಧರ್ಮಾಧಿಕರಣರು ನುಡಿದು ಕಳಿಸಿದಾಗ ಮನೆಗೆ ಬಂದು ತನ್ನ ತಂದೆಯನ್ನು ಏಕಾಂತಕ್ಕೆ ಕರೆದೊಯ್ದು ,ಆಮರದ ಪೊಟರೆಯಲ್ಲಿ ಅಡಗಿ ಕಳಿತು ಧರ್ಮಬುದ್ಧಿಯೇ ಸಂಪತ್ತೆಲ್ಲವನ್ನು ಕದ್ದು ಒಯ್ದಿರುವನೆಂದು ಸಾಕ್ಷಿ ನುಡಿಯಬೇಕೆನ್ನುತ್ತಾನೆ.ಆಗ ದುಷ್ಟಬುದ್ಧಿಯ ತಂದೆ 'ಪರಧನ ಹರಣ,ಸ್ವಾಮಿ ದ್ರೋಹ,ವಿಶ್ವಾಸ ದ್ರೋಹ ನಮ್ಮನ್ನು ನಾಶ ಪಡಿಸುತ್ತದೆ ಎಂದು ತಿಳಿದಿದ್ದರೂ ನನ್ನನ್ನು ಸಾಕ್ಷಿ ಮಾಡಿ ನಾಶಪಡಿಸಲು ಬಗೆದಿರುವೆ ಎಂದು ಹೇಳುವ ಸಂಧರ್ಭದಲ್ಲಿ ಮೇಲಿನ ಮಾತನ್ನು ದುಷ್ಟಬುದ್ಧಿ ಗೆ ಹೇಳುತ್ತಾನೆ.

**ಸ್ವಾರಸ್ಯ;** ಇದುವರೆಗೂ ಗೌರವದಿಂದ ಬದುಕಿದ್ದ ತಂದೆಯನ್ನು ಮಗ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವುದು,ದುಷ್ಟನಾದ ಮಗನನ್ನು ತಿದ್ದಲು ಪ್ರಯತ್ನಿಸಿದರೂ ಮಗ ನಿರ್ಲಕ್ಷಿಸುವುದು ,ಮಗನ ನಿರ್ಧಾರದಿಂದ ಇಡೀ ವಂಶವೇ ನಾಶವಾಗುತ್ತದೆ ಎಂಬ ತಂದೆಯ ಚಿಂತೆ ಮತ್ತು ಅಸಮಾಧಾನ ಸ್ವಾರಸ್ಯಪೂರ್ಣವಾಗಿ ವ್ಯಕ್ತವಾಗಿದೆ.

**35. 'ಅವಂತಿ ಸುಕುಮಾರನೆಂದು ಪೆಸರನಿಟ್ಟಂ'**

**ಉತ್ತರ:** ಪ್ರಸ್ತುತ ವಾಕ್ಯವನ್ನು ಶಿವಕೊಟ್ಯಾಚಾರ್ಯ ರವರು ರಚಿಸಿರುವ 'ವಡ್ಡಾರಾಧನೆ' ಎಂಬ ಕೃತಿಯಿಂದ ಆಯ್ದ 'ಸುಕುಮಾರ ಸ್ವಾಮಿ ಕಥೆ' ಎಂಬ ಗದ್ಯ ಪಾಠದಿಂದ ಆರಿಸಲಾಗಿದೆ.

**ಸಂದರ್ಭ** : ಯಶೋಭದ್ರೆಯ ಮನೆಯ ಐಶ್ವರ್ಯವನ್ನು ನೋಡಲೆಂದು ಬಂದ ವೃಷಭಾಂಕ ಅರಸನು ಸುಕುಮಾರ ಸ್ವಾಮಿಯ ವರ್ತನೆಯನ್ನು ಗಮನಿಸಿ ಆಶ್ಚರ್ಯಗೊಂಡು ಪ್ರಶ್ನಿಸಲಾಗಿ , ಯಶೋಭದ್ರೆ ' ಇದು ವ್ಯಾದಿಯಲ್ಲ ಬಿಳಿ ಸಾಸಿವೆ ಒತ್ತಿದಂತಾಗಿ ಸೊಂಟ ಅಲುಗಾಡಿಸಿದನು, ಸದಾಮಾಣಿಕ್ಯದ ಬೆಳಕಿನಲ್ಲಿರುತ್ತಿದ್ದವನು ದೀಪದ ಬೆಳಕು ನೋಡಿ ಕಣ್ಣೀರು ಸುರಿಯಿತು, ಕಮಲ–ನೈದಿಲೆಯ ಪರಿಮಳಯುಕ್ತವಾದ ಅಕ್ಕಿಯಿಂದ ಮಾಡಿದ ಅನ್ನವನ್ನೇ ಉಣ್ಣುತ್ತಿದ್ದನು, ಇಂದು ಬೇರೆ ಅಕ್ಕಿಯನ್ನು ಬೆರೆಸಿ ಅನ್ನ ಮಾಡಿದ್ದರಿಂದ ಪರಿಮಳಯುಕ್ತ ಅನ್ನವನ್ನು ನುಂಗಿ, ಬೇರೆ ಅನ್ನವನ್ನು ಉಗುಳುತ್ತಿದ್ದನು ಎಂದಾಗ ರಾಜನು ಆಶ್ಚರ್ಯಚಕಿತನಾಗಿ ಈತನ ಕ್ಷಣ ಮಾತ್ರದಭೋಗಕ್ಕೆ ನಮ್ಮ ಎಲ್ಲಾ ಕಾಲದ ಅರಸುತನ ಸಮವಲ್ಲ ಎಂದು ಮೆಚ್ಚಿ ಮೇಲಿನಂತೆ ಹೆಸರಿಡುವ ಸಂದರ್ಭದಲ್ಲಿ ಈ ಮಾತು ಬಂದಿದೆ.

**ಸ್ವಾರಸ್ಯ** : ಭೋಗೋಪಭೋಗಗಳಿಗೆ ಹೆಸರಾದ ರಾಜರು ಅನುಭವಿಸದ ಸುಖ ಭೋಗಗಳಿಲ್ಲ , ಆದರೆ ಒಬ್ಬ ವರ್ತಕನ ಮಗ ಅನುಭವಿಸಿವ ಸುಖ ಭೋಗದ ಮುಂದೆ ನಮ್ಮ ರಾಜ ಭೋಗ ಗೌಣ ಎಂದು ಭಾವಿಸಿ, ನಿಜವಾದ ಸುಖಿ ಎಂದರೆ ಸುಕುಮಾರ ಸ್ವಾಮಿಯೇ ಎಂದು ಮೆಚ್ಚಿ ಬಿರುದನ್ನು ನೀಡಿರುವುದು ಸ್ವಾರಸ್ಯಪೂರ್ಣವಾಗಿ ವ್ಯಕ್ತವಾಗಿದೆ.

**36. "ವಸಂತವಾಗುತ ಮುಟ್ಟೋಣ"**

**ಉತ್ತರ:** ಪ್ರಸ್ತುತ ವಾಕ್ಯವನ್ನು ಜಿ.ಎಸ್.ಶಿವರುದ್ರಪ್ಪ ರವರು ರಚಿಸಿರುವ ' ಎದೆ ತುಂಬಿ ಹಾಡಿದೆನು ' ಎಂಬ ಎಂಬ ಕವನಸಂಕಲನದಿಂದ ಆಯ್ದ ' ಸಂಕಲ್ಪಗೀತೆ ' ಎಂಬ ಪದ್ಯ ಪಾಠದಿಂದ ಆರಿಸಲಾಗಿದೆ.

**ಸಂದರ್ಭ** : ಕೈಗಾರಿಕೀಕರಣ, ಯಾಂತ್ರೀಕರಣಗಳಿಂದ ಪರಿಸರ ದಲ್ಲಿರುವ ಅನೇಕ ನದಿ–ಜಲಗಳು ಕಲುಷಿತವಾಗಿವೆ,ಕಾಡುಗಳು ಬರಡಾಗಿವೆ,ಹಾಗೆಯೇ ಮನುಷ್ಯರಲ್ಲಿಯೂ ಪ್ರೀತಿ ವಿಶ್ವಾಸದಂತಹ ಭಾವನೆಗಳು ಬತ್ತಿ ಹೋಗಿವೆ.ಬರಡಾಗಿರುವ ಕಾಡುಗಳು ವಸಂತ ಕಾಲದಲ್ಲಿ ಚಿಗುರೊಡೆದು ಹಸಿರಾಗುವಂತೆ ಮನುಷ್ಯರಲ್ಲಿಯೂ ಧನಾತ್ಮಕ ಭಾವನೆ ಮೂಡಿಸಬೇಕು ಎಂದು ಹೇಳುವ ಸಂದರ್ಭದಲ್ಲಿ ಈ ಸಾಲು ಬಂದಿದೆ.

**ಸ್ವಾರಸ್ಯ** : ಸಂಕಲ್ಪದತ್ತ ದೃಢನಿರ್ಧಾರದಿಂದ ಕಾರ್ಯಶೀಲರಾದರೆ "ಅಸಾಧ್ಯವಾದುದು ಯಾವುದೂ ಇಲ್ಲ",ದೃಢಸಂಕಲ್ಪದಿಂದ ಏನನ್ನು ಬೇಕಾದರು ಸಾಧಿಸಬಹುದು.ಐಕ್ಯದಿಂದ ಪ್ರಯತ್ನಶೀಲರಾದಾಗ ಬಲವರ್ಧಿಸುತ್ತದೆ.ಎಂಬುದು ಸ್ವಾರಸ್ಯಪೂರ್ಣವಾಗಿ ಅಭಿವ್ಯಕ್ತಗೊಂಡಿದೆ.

**37. "ತೇಲಿಸಿ ಮುಳುಗಿಸಿ ಖಂಡ–ಖಂಡಗಳ**

**ಉತ್ತರ:** ಪ್ರಸ್ತುತ ವಾಕ್ಯವನ್ನು ದ.ರಾ.ಬೇಂದ್ರೆ ರವರು ರಚಿಸಿರುವ ' ಗರಿ ' ಎಂಬ ಕವನಸಂಕಲನದಿಂದ ಆಯ್ದ ' 'ಹಕ್ಕಿ ಹಾರುತಿದೆ ನೋಡಿದಿರಾ ' ಎಂಬ ಪದ್ಯ ಪಾಠದಿಂದ ಆರಿಸಲಾಗಿದೆ.

**ಸಂದರ್ಭ** : ಕಾಲ ಉರುಳಿದಂತೆ ಪ್ರತಿಯೊಂದು ಘಟನೆಗಳು ಇತಿಹಾಸವಾಗುತ್ತ ಹೋಗುತ್ತದೆ ಎಂಬುದನ್ನು ಹಾರುವ ಹಕ್ಕಿಯೊಂದಿಗೆ ಸಮೀಕರಿಸಿ ಹೇಳಲಾಗಿದೆ.ಕಾಲ ಎಂಬ ಪಕ್ಷಿ ತನ್ನ ಪಯಣದಲ್ಲಿ ಸಣ್ಣ ಪುಟ್ಟ ರಾಜಮನೆತನ, ದೊಡ್ಡ ದೊಡ್ಡ ಸಾಮ್ರಾಜ್ಯಗಳನ್ನು ಹುಟ್ಟಿಸಿ,ಬೆಳೆಸಿ ಅದರ ಫಸಲನ್ನು ಕೊಯ್ಲು ಮಾಡಿದೆ.ಸಣ್ಣ–ದೊಡ್ಡ ಕೋಟೆ–ಕೊತ್ತಲಗಳನ್ನು ನಾಶಪಡಿಸಿ, ಖಂಡ–ಖಂಡಗಳನ್ನು ತೇಲಿಸಿ ಮುಳುಗಿಸಿದೆ.ತಾನೆ ಸಾರ್ವಭೌಮ ಎಂದು ಮೆರೆಯುತ್ತಿದ್ದವರ ನೆತ್ತಿಯನ್ನು ಕುಕ್ಕಿದೆ ಎಂದು ಹೇಳುವ ಸಂದರ್ಭದಲ್ಲಿ ಈ ಮಾತು ಬಂದಿದೆ.

**ಸ್ವಾರಸ್ಯ** : ನಿಸರ್ಗದ ಹೊಂದಾಣಿಕೆಯಂತೆ ಕಾಲ ಉರುಳುತ್ತದೆ,ಎಷ್ಟೇಪ್ರಭಾವಶಾಲಿಯಾದರು ಕಾಲಚಕ್ರದ ಮುಂದೆ ಎಲ್ಲರೂ ತಲೆ ಬಾಗಲೇ ಬೇಕು. ದೊಡ್ಡ ದೊಡ್ಡ ವ್ಯಕ್ತಿಯಾಗಲಿ,ಸಾಮ್ರಾಜ್ಯವಾಗಲಿ ಜಗತ್ತಿನಲ್ಲಿ ಯಾರೂ,ಯಾವುದೂ ಶಾಶ್ವತವಲ್ಲ ಎಂಬುದು ಸ್ವಾರಸ್ಯಪೂರ್ಣವಾಗಿ, ವ್ಯಕ್ತಗೊಂಡಿದೆ.

**38. "ಮಾದ್ರಿಯಲೊಂದು ಮಂತ್ರದೊಳಿಬ್ಬರುದಿಸಿದರು"**

**ಉತ್ತರ:** ಪ್ರಸ್ತುತ ವಾಕ್ಯವನ್ನು 'ಕುಮಾರವ್ಯಾಸ' ರವರು ರಚಿಸಿರುವ ' ಕರ್ನಾಟಕ ಭಾರತ ಕಥಾಮಂಜರಿ ' ಎಂಬ ಕಾವ್ಯದ ಉದ್ಯೋಗ ಪರ್ವದಿಂದ ಆಯ್ದ ' 'ಕೌರವೇಂದ್ರನ ಕೊಂದೆನೀನು ' ಎಂಬ ಪದ್ಯ ಪಾಠದಿಂದ ಆರಿಸಲಾಗಿದೆ.

**ಸಂದರ್ಭ** : ಸಂಧಿ ,ವಿಫಲವಾಗಿ ಯುದ್ಧ ಎಂದು ತೀರ್ಮಾನವಾದಾಗ ಕೃಷ್ಣನು ದುರ್ಯೋಧನನ ಶಕ್ತಿಯಾಗಿದ್ದ

ಕರ್ಣನ ಬಲವನ್ನು ಕುಗ್ಗಿಸಲು ಕರ್ಣನನ್ನು ತನ್ನೊಡನೆ ಕರೆತಂದು ಜನ್ಮರಹಸ್ಯವನ್ನು ತಿಳಿಸುತ್ತ, ಕುಂತಿ ಪಡೆದ ಮಕ್ಕಳಲ್ಲಿ ನೀನೇ ಮೊದಲಿಗ,ನಂತರ ಉಳಿದ ಪಾಂಡವರು ಜನಿಸುತ್ತಾರೆ ಎಂದು ಹೇಳುವ ಸಂದರ್ಭದಲ್ಲಿ ಈ ಮಾತು ಬಂದಿದೆ.

**ಸ್ವಾರಸ್ಯ:** ಕೃಷ್ಣನ ಭೇದ ತಂತ್ರ, ಶತ್ರುವಿನೊಂದಿಗೆ ಹೋರಾಡುವ ಮುನ್ನ ಶತ್ರು ಬಲವನ್ನು ಶಮನಗೊಳಿಸುವ ರಾಜತಂತ್ರ, ಪಾಂಡವರಿಗೆ ಅಪಾಯವಾಗದಂತೆ ಕರ್ಣನಿಂದ ಪಾಂಡವರನ್ನು ರಕ್ಷಿಸಬೇಕೆಂಬ ನಿರ್ಧಾರ, ಜನ್ಮ ರಹಸ್ಯವನ್ನು ತಿಳಿಸಿ ಕರ್ಣನನ್ನು ಭಾವನಾತ್ಮಕವಾಗಿ ಕುಗ್ಗಿಸುವ ಪ್ರಯತ್ನ ಸ್ವಾರಸ್ಯಪೂರ್ಣವಾಗಿ ವ್ಯಕ್ತಗೊಂಡಿದೆ.

**X. ಕೆಳಗಿನ ಪದ್ಯಭಾಗವನ್ನು ಪೂರ್ಣಗೊಳಿಸಿ ಬರೆಯಿರಿ. 1X4=4**

39. ಕೊಡಲಿ ಕೋರೆ_______________

_______________

_______________

_______ಹೇಳಲಿ ನಾನೆಷ್ಟಾ ಜನಕಾ

**ಅಥವಾ**

ಸಿಕ್ಕದ್ದು ತಗೊಂಡು __________

_______________

_______________ ಹಾಡಿದೆನಣ್ಣಾ

ಉತ್ತರ: ಕೊಡಲಿ ಕೋರೆ ಕುಡ ಕಬ್ಬಿಣ ಮೊಸರು ಬೆಣ್ಣಿ ಹಾಲಾ

ಉಪ್ಪು ಎಣ್ಣಿ ಅರಿಶಿಣ ಜೀರಗಿ ಅಕ್ಕಿ ಸಕ್ಕಾರಿ ಬೆಲ್ಲಾ

ಗಂಗಳ ಚೆರಗಿ ಮಂಗಳ ಸೂತ್ರ ಹೋದವು ಬೀಸು ಕಲ್ಲಾ

ಹಾಳಾಗಿ ಹೋಯಿತು ಅತ್ತು ವರ್ಣಿಸಿ ಹೇಳಲಿ ನಾನೆಷ್ಟಾ

**ಅಥವಾ**

ಸಿಕ್ಕದ್ದು ತಗೊಂಡು ಸರದ ನಿಂತರೊ ಊರಿಗೆ ಕೊಳ್ಳಿ ಕೊಟ್ಟಾ

ಬೂದಿ ಮಾಡ್ಯಾರೊ ಹಲಗಲಿ ಸುಟ್ಟು ಗುರ್ತುಳಿಯಲಿಲ್ಲೆಳ್ಳಷ್ಟು

ಕಾಣದೆ ಹೋಯಿತು ಕೆಟ್ಟು ವರ್ಣಿಸಿ ಹೇಳಿದೆ ಕಂಡಷ್ಟು

ಕುರ್ತಕೋಟಿ ಕಲ್ಮೇಶನ ದಯದಿಂದ ಹಾಡಿದೆನಣ್ಣಾ ಜನಕಾ

**XI. ಪದ್ಯ ಭಾಗವನ್ನು ಓದಿ,ಅರ್ಥ ಮಾಡಿಕೊಂಡು , ಅಡಕವಾಗಿರುವ ಮೌಲ್ಯವನ್ನಾಧರಿಸಿ ಸಾರಾಂಶ ಬರೆಯಿರಿ. 1X4=4**

40, **ತೆಗೆದುತ್ತರೀಯಮಂ ಮುರಿದು ಕುದುರೆಯ ಗಳಕೆ**

ಬಿಗಿದು ಕದಳೀದ್ರುಮಕೆ ಕಟ್ಟಲ್ಕೆ ಮುನಿಸುತರ್

ಮಿಗೆ ನಡುಗಿ ಬೇಡಬೇಡರಸುಗಳ ವಾಜಿಯಂ ಬಿಡು ಬಿಡಿವರೆಮ್ಮನೆನಲು

ನಗುತೆ ಪಾರ್ವರ ಮಕ್ಕಳಂಜಿದೊಡೆ ಜಾನಕಿಯ

ಮಗನಿದಕೆ ಬೆದರುವನೆ ಪೋಗಿನೀವೆಂದು ಲವ

ನಗಡುತನದಿಂದೆಬಿಲ್ಲಿರುವನೇರಿಸಿ ತೀಡಿ ಜೇಗೈದು ನಿಂತಿರ್ದನು

**ಉತ್ತರ:** ಶ್ರೀರಾಮನ ಅಶ್ವಮೇಧಯಾಗದ ಕುದುರೆ ದೇಶ–ದೇಶಗಳನ್ನು ಸುತ್ತಿ ವಾಲ್ಮೀಕಿಯ ಆಶ್ರಮದ ಕಡೆಗೆ ಬರುತ್ತದೆ. ಇದನ್ನು ಗಮನಿಸಿದ ಲವನು ಕುದುರೆಯ ಬಳಿಗೆ ಹೋದಾಗ ಅದರ ಹಣೆಯಲ್ಲಿ ಬರೆದ ಲೇಖನವನ್ನು ಓದಿ,ಆತನ ಗರ್ವವನ್ನು ಬಿಡಿಸಲೇ ಬೇಕೆಂದು ತನ್ನ ಹೆಗಲ ಮೇಲಿದ್ದ ಉತ್ತರೀಯವನ್ನು ಉರಿ ಮಾಡಿ ಕುದುರೆಯ ಕೊರಳಿಗೆ ಬಿಗಿದು ಬಾಳೆಯ ಗಿಡಕ್ಕೆ ಕಟ್ಟುತ್ತಾನೆ. ಇದನ್ನು ಕಂಡ ಋಷಿಕುಮಾರರು ನಡುಗಿ "ಬೇಡ–ಬೇಡ ಈ ಕುದುರೆಯನ್ನು ಕಟ್ಟಬೇಡ ಇದು ಅರಸರ ಕುದುರೆ,ಅವರಿಗೆ ಗೊತ್ತಾದರೆ ನಮ್ಮನ್ನು ಹೊಡೆಯುವರು ' ಎಂದು ಹೆದರಿದರೆ , ಲವನು ನಗುತ್ತಾ "ಬ್ರಾಹ್ಮಣರ ಮಕ್ಕಳು ಹೆದರಿದರೆ, ಜಾನಕಿಯ ಮಗನಾದ ನಾನು ಹೆದರುವುದಿಲ್ಲ. ನಿಮಗೆ ಭಯವಾದರೆ ಇಲ್ಲಿಂದ ಹೊರಟು ಹೋಗಿ" ಎಂದು ಹೇಳುತ್ತಾ ತನ್ನಲ್ಲಿದ್ದ ಬಿಲ್ಲನ್ನು ಹೆದೆಯೇರಿಸಿ ಯುದ್ಧಕ್ಕೆ ಸನ್ನದ್ಧನಾಗಿ ನಿಲ್ಲುತ್ತಾನೆ.

ಲವಕುಶರು ರಾಜನ ಮಕ್ಕಳೇ ಆಗಿದ್ದರೂ , ವಾಲ್ಮೀಕಿಯ ಆಶ್ರಮದಲ್ಲಿ ಜನಿಸಿ, ಋಷಿಕುಮಾರರ ಜೊತೆಯಲ್ಲಿ ಬೆಳೆದರೂ 'ಹುಟ್ಟು ಗುಣ ಘಟ್ಟ ಹತ್ತಿದರು ಹೋಗದು' ಎಂಬ ಗಾದೆ ಮಾತಿನಂತೆ ಕ್ಷತ್ರಿಯ ಗುಣ,ಕ್ಷಾತ್ರ ತೇಜಸ್ಸು, ಎದುರಿಸುವ ಸಾಮರ್ಥ್ಯ ತಾನಾಗಿಯೇ ರಕ್ತಗತವಾಗಿತ್ತು.ಎಂತಹ ಸಂದಿಗ್ದ ಪರಿಸ್ಥಿತಿಯನ್ನು ಎದುರಿಸುವ ಶಕ್ತಿಯನ್ನು ತಾಯಿ ಜಾನಕಿಯಿಂದ ಕಲಿತಿದ್ದರೂ ತಾವು ಅಸಮರ್ಥರು , ಕೈಲಾಗದವರು ಎಂದು ಹಿಂದೆ ಸರಿಯದೆ ದಿಟ್ಟತನದಿಂದ ಎದುರಿಸುವ ಗುಣ, ಬಾಲ ಸಹಜವಾದ ಕುತೂಹಲ , ಸಾಹಸ ಪ್ರವೃತ್ತಿ 'ಬೆಳೆಯುವ ಸಿರಿ ಮೊಳಕೆಯಲ್ಲಿ' ಎಂಬಂತೆ ಶ್ರೀರಾಮನನ್ನೆ ಎದುರಿಸಲು ಸಿದ್ಧನಾದ ಗುಣ ಬಾಲ್ಯದಲ್ಲಿಯೇ ಕರಗತವಾಗಿತ್ತು. ಬಾಲ್ಯದಿಂದಲೇ ರೂಢಿಸಿಕೊಂಡ ಧೈರ್ಯ , ಋಷಿಕುಮಾರರ ಸಹಜ ಭಯದ ಗುಣಗಳ ಮೌಲ್ಯಗಳು ಮನೋಜ್ಞವಾಗಿ ಅಭಿವ್ಯಕ್ತವಾಗಿವೆ.

**XII. ಈ ಕೆಳಗಿನ ಪ್ರಶ್ನೆಗಳಿಗೆ ಎಂಟು – ಹತ್ತು ವಾಕ್ಯಗಳಲ್ಲಿ ಉತ್ತರಿಸಿ 2X4=8**

41 **'ವೆಸ್ಟ್ ಮಿನ್‌ಸ್ಟರ್ ಅಬೆ 'ಪ್ರಾರ್ಥನಾ ಮಂದಿರದಲ್ಲಿನ 'ರಾಯಲ್ ಚಾಪೆಲ್ ' ಮತ್ತು 'ಸ್ಟೋನ್ ಆಫ್ ಸ್ಕೋನ್ ' ಗಳ ವಿಶೇಷತೆಯನ್ನು ಕುರಿತು ಬರೆಯಿರಿ.**

**ಅಥವಾ**

**ವೂಲವರ್ಥ ಸ್ಟೇಷನರಿ ಅಂಗಡಿ ಹಾಗೂ ಲಂಡನ್ನಿನ ಹೆಣ್ಣನ್ನು ಸತ್ಕರಿಸುವ ರೀತಿಯನ್ನು ಲೇಖಕರು ಹೇಗೆ ವಿವರಿಸಿದ್ದಾರೆ ?**

**ಉತ್ತರ:** 'ವೆಸ್ಟ್ ಮಿನ್‌ಸ್ಟರ್ ಅಬೆ ' ಎಂಬ ಪ್ರಾರ್ಥನಾ ಮಂದಿರ ಒಂದು ಸಾವಿರ ವರ್ಷದಷ್ಟು ಪುರಾತನವಾದ ಮಂದಿರ. ಇದರಲ್ಲಿ ಸಂತರು,ಸಾರ್ವಭೌಮರು ಹಾಗೂ ಕವಿಗಳ ಸ್ಮಾರಕಗಳಿವೆ. ಈ ಪ್ರಾರ್ಥನಾ ಮಂದಿರದಲ್ಲಿ ರಾಯಲ್ ಚಾಪೆಲ್ (ರಾಜ ವಿಭಾಗ) ಎಂಬ ಭಾಗವಿದೆ. ಇಲ್ಲಿ ಇಂಗ್ಲೆಂಡನ್ನು ಆಳಿದ ರಾಜರಿಗೆ ವಿಶಿಷ್ಟ ಸ್ಥಾನ ಕಲ್ಪಿಸಲಾಗಿದೆ.ರಾಜದಂಡ, ಕಿರೀಟ ಒಂದಲ್ಲಾ ಒಂದು ದಿನ ನೆಲಕ್ಕುರಳಲೇಬೇಕು. ಯಾರೂ ಶಾಶ್ವತವಲ್ಲ ಎಂಬ ಸತ್ಯ ತಿಳಿದಿದ್ದರೂ, ಸತ್ತ ಎಲ್ಲಾ ರಾಜರಿಗೂ ಸ್ಮಾರಕಗಳ ಮೂಲಕ ಗೌರವ ಸಲ್ಲಿಸಿದ್ದಾರೆ ಬೆನ್ ಜಾನ್ಸನ್ ನನ್ನು ಜನರು ತುಳಿಯುತ್ತಾ ನಡೆಯುತ್ತಾರೆ. ಸಿಂಹದೆದೆಯ ರಿಚರ್ಡ , 2 ನೇ ಎಡ್ವರ್ಡ ಅರ್ಲ್ ಆಫ್ ಸ್ಟ್ಯಾಫೋರ್ಡ,

ರಾಣಿ ಎಲಿಜಬತ್ 1ನೆಯ ಜೇಮ್ಸ್ ಮೊದಲಾದ ಅರಸ ಅರಸಿಯರ ಸ್ಮಾರಕಗಳು ಈ ರಾಜಮಂದಿರದಲ್ಲಿದೆ , ಗೋ–ರಿಯ ಮೇಲೆ ಈ ವ್ಯಕ್ತಿಗಳು ಮಲಗಿಕೊಂಡಂತೆ ಕೆತ್ತಲಾಗಿದೆ. ಇಲ್ಲಿಯ ಕೆತ್ತನೆಯ ಕೆಲಸವನ್ನೆಲ್ಲ ಬಂಗಾರದ ಬಣ್ಣದಲ್ಲಿಯೇ ಮಾಡಲಾಗಿದೆ, ಮಂದಿರದ ಹಿಂಬಾಗದಲ್ಲಿ 7ನೆಯ ಹೆನ್ರಿಯ ಭವ್ಯದ ಗೋರಿ ಇದೆ.

'ವೆಸ್ಟ್ ಮಿನ್‌ಸ್ಟರ್ ಅಬೆ ಪ್ರಾರ್ಥನಾ ಮಂದಿರದ ಮಧ್ಯ ಭಾಗದಲ್ಲಿ 'ಸ್ಟೋನ್ ಆಫ್ ಸ್ಕೋನ್ ' ಎಂಬ ಕಲ್ಲು ಪಾಟಿಯನ್ನು ಇರಿಸಲಾಗಿದೆ. ಸಾಮ್ರಾಟರ ರಾಜ್ಯಾಭಿಷೇಕ ವಾಗುವಾಗ ಅವರ ಸಿಂಹಾಸನದ ಮೇಲೆ ಈ ಕಲ್ಲು ಪಾಟಿಯನ್ನು ಹಾಕಲಾಗುತ್ತೆ. ಪಟ್ಟಾಭಿಷೇಕವಾಗುವ ಎಲ್ಲಾ ಸಮ್ರಾಟರು ಇದರ ಮೇಲೆಯೇ ಕೂರಬೇಕು, 3ನೆಯ ಎಡ್ವರ್ಡನು ಸ್ಕಾಟ್‌ಲೆಂಡಿನ ಅರಸರಿಂದ ಕಿತ್ತುಕೊಂಡು ಬಂದಂತೆ ತೋರುತ್ತದೆ. ಅಂದಿನಿಂದ ಎಲ್ಲಾ ಸಾಮ್ರಾಟರ ಪಟ್ಟಾಭಿಷೇಕವು ಈ ಕಲ್ಲಿನ ಮೇಲೆಯೇ ಆಗಿದೆ, ಇಂಗ್ಲೆಂಡಿನ ಅತುಲ ವೈಭವವನ್ನು ನೋಡಿದರೆ ಈ ಕಲ್ಲಿನಲ್ಲಿ ಯಾವುದೋ ಸಿದ್ಧಿ, ಮಂತ್ರ ,ಏನೋ ಒಂದು ವಿಶೇಷತೆ ಇದ್ದಂತೆ ತೋರುತ್ತದೆ.

ಅಥವಾ

ಲಂಡನ್ ನಗರದ ಪ್ರವಾಸದ ಸಂದರ್ಭದಲ್ಲಿ ಪೇಟೆಯಲ್ಲಿ ತಿರುಗಾಡುತ್ತಿದ್ದಾಗ ಲೇಖಕರು ವೂಲವರ್ಥ ಎಂಬ ಸ್ಟೇಷನರಿ ಅಂಗಡಿಯನ್ನು ನೋಡುತ್ತಾರೆ.ಪ್ರಾಚೀನ ಮಹಾಕಾವ್ಯದಂತೆ ಇದೊಂದು ಮಹಾಕೋಶದಂತೆ ತೋರುತ್ತದೆ.ಇಲ್ಲಿ ಎಲ್ಲಾತರದ ಸಾಮಾನುಗಳನ್ನು ಒಂದು ಪೆನ್ನಿಯಿಂದ ಆರು ಪೆನ್ನಿಯವರೆಗೆ ಮಾರುತ್ತಾರೆ.ಅಂಗಡಿಯಲ್ಲಿ ವಿವಿಧ ವಿಭಾಗಗಳನ್ನು ನಿರ್ಮಿಸಿರುವ ಚಮತ್ಕಾರ ನೋಡಬೇಕಾದದು. ಬೂಟು,ಕಾಲುಚೀಲ,ಚಣ್ಣ,ಸಾಬೂನು, ಔಷದಿ,ಪುಸ್ತಕ,ಅಡುಗೆಯ ಪಾತ್ರ,ಇಲೆಕ್ಟ್ರಿಕ್ ದೀಪದ ಸಾಮಾನು, ಫೋಟೋ, ಅಡವಿಯ ಹೂವು, ಯುದ್ದ ಸಾಮಗ್ರಿಗಳು ಹೀಗೆ ಎಲ್ಲಾ ವಿಧದ ವಸ್ತುಗಳು ವೂಲವರ್ಥ ಸ್ಟೇಷನರಿ ಅಂಗಡಿಯಲ್ಲಿ ದೊರೆಯುತ್ತವೆ. ಸ್ಟ್ರಾಂಡ್ ದಲ್ಲಿಯ ಸ್ಯಾವ್ಯೂಯ್ ಸಿಂಪಿಗಳು ಐವತ್ತು ಶೀಲಿಂಗಿನ ಸಿಂಪಿಗಳೆಂದೇ ಪ್ರಸಿದ್ಧಿಯಾಗಿದ್ದಾರೆ,ಸಾದಾ ಸೂಟು ಹೊಲಿಯಲು ನೂರು ರೂಪಾಯಿಗಳು ಬೇಕು, ಆದರೆ ಇವರು ಐವತ್ತು ರೂಪಾಯಿಗಳಿಗೆ ಹೊಲಿಯುತ್ತಾರೆ.ಇವರ ಶಾಖೆಗಳು ನಗರದ ಎಲ್ಲಾಕಡೆಗಳಲ್ಲೂ ಇವೆ.

ಇಂಗ್ಲೇಂಡಿನಲ್ಲಿ ಹೆಣ್ಣು ಮಕ್ಕಳನ್ನು ಅತ್ಯಾದರದಿಂದ ನೆಡೆಸಿಕೊಳ್ಳುವ ಸಂಸ್ಕೃತಿಯನ್ನು ಕಾಣಬಹುದು.ಇಲ್ಲಿ ಗಂಡಿಗಿಂತ ಹೆಣ್ಣು ಮಕ್ಕಳೇ ಹೆಚ್ಚಿದ್ದಂತೆ ಕಾಣುತ್ತದೆ.ಎಲ್ಲಾ ಅಂಗಡಿಗಳಲ್ಲಿ ಸಾಮಾನ್ಯವಾಗಿ ಸ್ತ್ರೀಯರೇ ಕೆಲಸ ಮಾಡುತ್ತಾರೆ. ಉಪಹಾರ ಗೃಹಗಳಲ್ಲಿ ಮಾಣಿಗಳಿಲ್ಲ ,ಬೆಂಗಳೂರಿನ ಮಾತಿನಲ್ಲಿ ಹೇಳುವುದಾದರೆ ಅಮ್ಮಣ್ಣಿಗಳಿರುತ್ತಾರೆ. ದೊಡ್ಡ ಅಂಗಡಿಗಳಲ್ಲಿ ಟೈಪಿಸ್ಟ್, ಕಾರಕೂನ ಹೆಣ್ಣು ಮಕ್ಕಳೇ ಆಗಿರುತ್ತಾರೆ.ಸಿನಿಮಾಗೃಹಗಳಲ್ಲಿ ಜಾಗ ಹುಡುಕಿಕೊಡುವ ಕೆಲಸ, ಕಾಲೇಜುಗಳಲ್ಲಿ ಸಹ ವಿದ್ಯಾರ್ಥಿನಿಯರ ಅನುಕೂಲತೆಗಾಗಿ ಸಿಪಾಯಿಣಿಯನ್ನು ನೇಮಿಸಿಕೊಂಡಿದ್ದಾರೆ.ಒಟ್ಟಿನಲ್ಲಿ ಹೇಳುವುದಾದರೆ ಹೆಣ್ಣು ಮಕ್ಕಳಿಗೆ ವಿಶೇಷವಾದ ಸ್ಥಾನಮಾನ ನೀಡಿ ಗೌರವಿಸುವ ಸಂಸ್ಕೃತಿ ಇದೆ ಎಂದು ಲೇಖಕರು ತಿಳಿಸಿದ್ದಾರೆ.

**42. ಸಹಾಯವನ್ನು ನಿರೀಕ್ಷಿಸಿ ಬಂದ ದ್ರೋಣರನ್ನು ದ್ರುಪದ ನಿಂದಿಸಿದ ಸಂದರ್ಭದ ಸಂಭಾಷಣೆಯನ್ನು ಸಂಗ್ರಹಿಸಿ ಬರೆಯಿರಿ. ಅಥವಾ (2023 ರಲ್ಲಿ ಪುನರಾವರ್ತನೆಯಾಗಿದೆ,) 'ಕೆಮ್ಮನೆ ಮೀಸೆವೊತ್ತೆನೇ' ಎಂದು ದ್ರೋಣನು ದ್ರುಪದನ ವಿರುದ್ದ ಶಪಥ ಮಾಡಲು ಕಾರಣವಾದ ಅಂಶಗಳನ್ನು ವಿವರಿಸಿ.**

**ಉತ್ತರ:** ದ್ರೋಣರಿಗೆ ಬಡತನ ಬಂದಾಗ ತನ್ನ ಮಗನಾದ ಅಶ್ವತ್ಥಾಮನೊಂದಿಗೆ ದೇಶ ದೇಶಗಳನ್ನು ಸುತ್ತಿ ಪರುಶುರಾಮನ ಬಳಿಗೆ ಬಂದು ,ಅವರಿಂದ ದಿವ್ಯಾಸ್ತ್ರಗಳನ್ನು ಪಡೆದು ಹಿಂದಿರುಗುವಾಗ ಛತ್ರಾವತಿಯಲ್ಲಿ ರಾಜ್ಯಭಾರ ಮಾಡುತ್ತಿರುವುದು ನನ್ನ ಬಾಲ್ಯದ ಸಹಪಾಠಿ ದ್ರುಪದ ಎಂದು ತಿಳಿದು ಆತನ ಅರಮನೆಗೆ ಬರುತ್ತಾನೆ. ಅಲ್ಲಿದ್ದ ಸೇವಕನನ್ನು ಕರೆದು , 'ನಿಮ್ಮ ಬಾಲ್ಯದ ಗೆಳೆಯ ದ್ರೋಣ ಎಂಬ ಪಾರ್ವ ನಿಮ್ಮನ್ನು ಭೇಟಿಯಾಗಲು ಬಂದಿದ್ದಾನೆಂದು ' ತಿಳಿಸಲು ಹೇಳಿದಾಗ ಆ ಸೇವಕ ದ್ರುಪದನಿಗೆ ಹಾಗೆಯೇ ಹೇಳುತ್ತಾನೆ. ಆದರೆ ದ್ರುಪದ 'ಅವನಾರಿಗೋ ಭ್ರಾಂತಿ ಇರಬೇಕು, ದ್ರೋಣನೆಂಬ ಬ್ರಾಹ್ಮಣ ನನಗೆ ಹೇಗೆ ಗೆಳೆಯನಾಗಲು ಸಾಧ್ಯ ? ಆತನನ್ನು ' ಹೊರನೂಕು ' ಎಂದು ಹೇಳಿದ ಮಾತನ್ನು ಸೇವಕ ಬಂದು ದ್ರೋಣನಿಗೆ ಹಾಗೆಯೇ ಹೇಳುತ್ತಾನೆ, ಆಗ ದ್ರೋಣನೇ ಒತ್ತಾಯ ಪೂರ್ವಕವಾಗಿ ಒಳಬಂದು ದ್ರುಪದನನ್ನು ಕುರಿತು , 'ನೀವು ನನ್ನ ಜೊತೆಯಲ್ಲಿ ಓದಿದ್ದು ನೆನಪಿಲ್ಲವೇ ?' ಎಂದಾಗ " ರಾಜನಿಗೂ, ಬ್ರಾಹ್ಮಣನಿಗೂ ಎಲ್ಲಿಯ ಗೆಳೆತನ, ಇಷ್ಟು ನಾಚಿಕೆಗೆಟ್ಟ ಮನುಷ್ಯರೂ ಇರುತ್ತಾರೆಯೇ? ಈತನನ್ನು ಎಳೆದು ಆಚೆ ಹಾಕಿರಿ " ಎಂದು ದ್ರುಪದ ಹೇಳುತ್ತಾನೆ . ಆಗ ದ್ರೋಣನು "ಐಶ್ವರ್ಯ ಬಂದರೆ ಮದ್ಯ ಕುಡಿದವರಂತೆ ಆಡುತ್ತಾರೆ ಎಂಬುದು ನಿಜವಾಯಿತು. ಮಾತು ತಪ್ಪುತ್ತದೆ, ಮುಖದಲ್ಲಿ ವಕ್ರತೆ ಉಂಟಾಗುತ್ತದೆ, ನಾಚಿಕೆಗೆಟ್ಟವರಂತೆ ವರ್ತಿಸುತ್ತಾರೆ, ಸಂಬಂಧವನ್ನೆ ಮರೆಯುತ್ತಾರೆ. ಇದನ್ನೆಲ್ಲ ನೋಡಿದರೆ ಸಿರಿಯು ಮದ್ಯದೊಂದಿಗೆ ಹುಟ್ಟಿದೆ ಎಂಬುವುದರಲ್ಲಿ ಯಾವುದೇ ಸಂಶಯವಿಲ್ಲ. ದುಷ್ಟನೊಣಕ್ಕೆ ತಿಪ್ಪೆಯೇ ಶ್ರೇಷ್ಠ. ನಿನ್ನ ಪರಾಕ್ರಮ ನನ್ನವರೆಗೂ ಬರಲು ಸಾಧ್ಯವಿಲ್ಲ .ಇಬ್ಬರೂ ಜೊತೆಯಲ್ಲಿಯೇ ಓದಿದ್ದೇವೆ ಎಂಬ ಒಂದೇ ಒಂದು ಕಾರಣದಿಂದ ನಿನ್ನನ್ನು ಕೊಲ್ಲಲಾಗುತ್ತಿಲ್ಲ. ಆದರೆ ತುಂಬಿದ ಸಭೆಯಲ್ಲಿ ನನ್ನನ್ನು ಹೀಯಾಳಿಸಿದ ನಿನ್ನನ್ನು ನನ್ನ ಶಿಷ್ಯರಿಂದ ಬಂಧಿಸದೆ ಬಿಟ್ಟರೆ ನಾನು ಮೀಸೆ ಹೊತ್ತಿರುವುದು ವ್ಯರ್ಥವಾಗುವುದಿಲ್ಲವೇ.? " ಎಂದು ಪ್ರತಿಜ್ಞೆ ಮಾಡಿದನು.ಅಥವಾ

ಯಜ್ಞ ಸೇನ ಎಂಬ ಗುರುಗಳ ಬಳಿಯಲ್ಲಿ ವಿದ್ಯಾಭ್ಯಾಸ ಮಾಡಿತ್ತಿದ್ದಾಗ ದ್ರೋಣ ಮತ್ತು ದ್ರುಪದರು ಸಹಪಾಠಿಗಳಾಗಿದ್ದರು. ಶಿಕ್ಷಣ ಮುಗಿಸಿ ಬೀಳ್ಕೊಡುವಾಗ ದ್ರುಪದನು 'ತಾನು ದೊರೆಯಾದ ಬಳಿಕ ನನ್ನ ಬಳಿಗೆ ಬಂದರೆ ಸಹಾಯ ಮಾಡುವುದಾಗಿ' ದ್ರೋಣನಿಗೆ ಹೇಳಿದ್ದನು.ದ್ರೋಣನಿಗೆ ಬಡತನ ಬಂದಾಗ ದೇಶ ದೇಶ ಸುತ್ತಿ ಪರುಶುರಾಮನಲ್ಲಿಗೆ ಬಂದು ದಿವ್ಯಾಸ್ತ್ರಗಳನ್ನು ಪಡೆದು ಹಿಂದಿರುಗುತ್ತಿದ್ದಾಗ ವಿದ್ಯಾಭ್ಯಾಸ ಮಾಡುವ ಸಂದರ್ಭದಲ್ಲಿ ದ್ರುಪದ ಆಡಿದ ಮಾತುಗಳು ನೆನಪಾದವು . ಈ ವೇಳೆಗೆ ದ್ರುಪದನು ಛತ್ರಾವತಿಯಲ್ಲಿ ರಾಜ್ಯಭಾರ ಮಾಡುತ್ತಿರುವ ವಿಷಯ ತಿಳಿದು ಸಹಾಯವನ್ನು ನಿರೀಕ್ಷಿಸಿ ಅರಮನೆಗೆ ಬಂದನು.ಅಷ್ಟೊತ್ತಿಗಾಗಲೇ ದ್ರುಪದನಿಗೆ ಅಧಿಕಾರದ ಮದ ಆವರಿಸಿತ್ತು. ಸಹಾಯ ಅರಸಿ ಬಂದ ದ್ರೋಣನನ್ನು ಸಹಪಾಠಿಯೆಂದು ಗುರುತಿಸದೆ ಮದೋನ್ಮತ್ತನಾಗಿ

ಅವಮಾನಗೊಳಿಸಿ, ಆತನನ್ನು ಹೊರಗಟ್ಟಲು ಆದೇಶಿಸುತ್ತಾನೆ. ದ್ರುಪದನ ಗರ್ವ, ಅಹಂಕಾರ,ಮದ,ಅಸಹನೆ,ಅಗೌರವ, ಸ್ವಪ್ರತಿಷ್ಠೆಯನ್ನೆಲ್ಲ ಕಂಡು ಐಶ್ವರ್ಯ ಹೆಂಡದೊಡನೆ ಹುಟ್ಟಿದೆ,ಸಿರಿಯ ಮದದಿಂದ ಮಾತು ತಪ್ಪುತ್ತದೆ,ಸಂಬಂಧ ಮರೆಸುತ್ತದೆ,ನಾಚಿಕೆ ಬಿಟ್ಟವರಂತೆ ವರ್ತಿಸುತ್ತಾರೆ. ದ್ರುಪದನ ಮಾತುಗಳು,ವರ್ತನೆಯಿಂದ ದ್ರೋಣರಿಗೆ ಮರ್ಮಾಘಾತವಾಗುತ್ತದೆ.ಅಲ್ಲಿಯೇ ಕೊಂದುಬಿಡಬೇಕೆಂಬ ಕೋಪಬರುತ್ತದೆ. ಆದರೆ ಜೊತೆಯಲ್ಲಿ ಓದಿದ ಒಂದೇ ಒಂದು ಕಾರಣದಿಂದ ತಾನೆ ಆತನನ್ನು ಕೊಲ್ಲಲು ಮನಸ್ಸಾಗದೆ ಹಾಗೆಯೇ ಬಿಡುತ್ತಾನೆ, ದ್ರುಪದನನ್ನು ಕುರಿತು, ' ತುಂಬಿದ ಸಬೆಯಲ್ಲಿ ಹೀಯಾಳಿಸಿದ ನಿನ್ನನ್ನು ಮುಂದೊಂದು ದಿನ ನನ್ನ ಶಿಷ್ಯರಿಂದಲೇ ನೀನು ಗಾಬರಿಗೊಳ್ಳುವಂತೆ ನಿರಾಯಸವಾಗಿ ಬಂಧಿಸದೆ ಬಿಟ್ಟರೆ 'ಕೆಮ್ಮನೆ ಮೀಸೆವೊತ್ತೆನೇ'?ಎಂದು ಶಪಥ ಗೈಯುತ್ತಾನೆ.

**XIII. ಗದ್ಯಭಾಗವನ್ನು ಓದಿಕೊಂಡು ಪ್ರಶ್ನೆಗಳಿಗೆ ಉತ್ತರಿಸಿ 1X4=4 (2+2)**

ಬಸವಣ್ಣನವರು ಸರ್ವೋದಯ ನಿಷ್ಠವಾದ ಒಂದು ಆದರ್ಶ ಸಮಜವನ್ನು ಕಟ್ಟಬಯಸಿದರು. ಸಾಮಾನ್ಯ ಜನತೆಯನ್ನು ಉದ್ಧಾರೋನ್ಮುಖವಾಗಿಸಬೇಕಾದರೆ ಅವರಿಗೆ ಅರ್ಥವಾಗುವ ಭಾಷೆಯಲ್ಲಿ ವಿಷಯವನ್ನು ಎಂಬುದನ್ನು ಮನಗಂಡು ಸಂಸ್ಕೃತ ಭಾಷೆಯಲ್ಲಿ ನಿಕ್ಷಿಪ್ತವಾಗಿ ಜನಸಮಾನ್ಯರಿಗೆ ಅಗಮ್ಯವಾಗಿದ್ದ ಧರ್ಮ ರಹಸ್ಯವನ್ನು ತಿಳಿಯಾದ ಅಚ್ಚಗನ್ನಡದಲ್ಲಿ ತಿಳಿಸಿಕೊಟ್ಟರು. ಧರ್ಮವೆಂದರೆ ಆಗ್ರಹ್ಯವಾದ ಜಠಿಲ ಜಾಲವಲ್ಲ,ಒಂದು ವರ್ಗದ ಸೊತ್ತಲ್ಲ, ಎಲ್ಲರ ಆಸ್ತಿಯಾಗಬೇಕು. ಎಲ್ಲರ ಅಭ್ಯುದಯಕ್ಕೆ ಕಾರಣವಾಗಬೇಕು.ಎಂಬುದು ಬಸವಣ್ಣನವರ ನಿಲುವು ಆಗಿತ್ತು.ದೇವಲೋಕ, ಮರ್ತ್ಯಲೋಕಗಳಿಗೆ ಹೊಸ ಅರ್ಥ ಕಲ್ಪಿಸಿದರು.ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ, ಆಚಾರವೆ ಸ್ವರ್ಗದ,ಅನಾಚಾರವೇ ನರಕ ಎಂದು ಹೇಳಿ ಮರ್ತ್ಯಲೋಕ ಎಂಬುದು ಕರ್ತಾರನ ಕಮ್ಮಟವಯ್ಯ,ಇಲ್ಲಿ ಸಲ್ಲುವವರು ಅಲ್ಲಿಯು ಸಲ್ಲುವರಯ್ಯ, ಸ್ವರ್ಗದ ಕೀಲಿಕೈ ಇರುವುದು ಮರ್ತ್ಯದಲ್ಲಿ ಎಂದು ವ್ಯಾಖ್ಯಾನಿಸಿದರು. "ದೇವನೊಬ್ಬ ನಾಮ ಹಲವು" ಎಂದು ಬಹು ದೇವೋಪಾಸನೆಯನ್ನು ಖಂಡಿಸಿದರು.ಕಾಯಕ ತತ್ವಕ್ಕೆ ಪ್ರಾಧಾನ್ಯತೆ ನೀಡಿದರು .ಅಂತರಂಗ ಬಹಿರಂಗಗಳ ಸಾಮರಸ್ಯವನ್ನು ತಿಳಿಸಿ ನುಡಿಗೆ ತಕ್ಕ ನಡೆ ಇರಬೇಕು ಎಂದರು, ಸತ್ಯ ಅಹಿಂಸೆಗಳ ಅನುಷ್ಠಾನ , ಜಾತಿ ನಿರ್ಮೂಲನೆ , ಅಸ್ಪೃಶ್ಯತಾ ನಿವಾರಣೆ ಇಂದಿಗೂ ಅವಶ್ಯವೂ , ಅನಿವಾರ್ಯವೂ ಆಗಿದೆ. ಆದ್ದರಿಂದಲೇ ಬಸವಣ್ಣನವರು ಜಗತ್ತಿನ ಯಾವಕ್ರಾಂತಿಕಾರಿಗೂ ಮಿಗಿಲಾಗಿ ಕಾಣುತ್ತಾರೆ.

**43 ಪ್ರಶ್ನೆಗಳು :**

**(ಅ) ಧರ್ಮದ ಬಗೆಗೆ ಬಸವಣ್ಣನವರ ನಿಲುವು ಏನಾಗಿತ್ತು ?**

**(ಬ) ಬಸವಣ್ಣನವರು ಏಕೆ ಒಬ್ಬ ಕ್ರಾಂತಿ ಕಾರಿ ಎನಿಸಿಕೊಂಡಿದ್ದರು.**

ಉತ್ತರ ; (ಅ).ಧರ್ಮವೆಂದರೆ ಆಗ್ರಹ್ಯವಾದ ಜಠಿಲ ಜಾಲವಲ್ಲ, ಒಂದು ವರ್ಗದ ಸೊತ್ತಲ್ಲ, ಎಲ್ಲರ ಆಸ್ತಿಯಾಗಬೇಕು. ಎಲ್ಲರ ಅಭ್ಯುದಯಕ್ಕೆ ಕಾರಣವಾಗಬೇಕು.ಎಂಬುದು ಬಸವಣ್ಣನವರ ನಿಲುವು ಆಗಿತ್ತು.

(ಬ)."ದೇವನೊಬ್ಬ ನಾಮ ಹಲವು" ಎಂದು ಬಹು ದೇವೋಪಾಸನೆಯನ್ನು ಖಂಡಿಸಿದರು.ಕಾಯಕ ತತ್ವಕ್ಕೆ ಪ್ರಾಧಾನ್ಯತೆ ನೀಡಿದರು .ಅಂತರಂಗ ಬಹಿರಂಗಗಳ ಸಾಮರಸ್ಯವನ್ನು ತಿಳಿಸಿ ನುಡಿಗೆ ತಕ್ಕ ನಡೆ ಇರಬೇಕು ಎಂದರು, ಸತ್ಯ ಅಹಿಂಸೆಗಳ ಅನುಷ್ಠಾನ , ಜಾತಿ ನಿರ್ಮೂಲನೆ , ಅಸ್ಪೃಶ್ಯತಾ ನಿವಾರಣೆ ಇಂದಿಗೂ ಅವಶ್ಯವೂ , ಅನಿವಾರ್ಯವೂ ಆಗಿದೆ. ಆದ್ದರಿಂದಲೇ ಬಸವಣ್ಣನವರು ಜಗತ್ತಿನ ಯಾವಕ್ರಾಂತಿಕಾರಿಗೂ ಮಿಗಿಲಾಗಿ ಕಾಣುತ್ತಾರೆ.

**XIV. ಕೆಳಗಿನ ಯಾವುದಾದರು ಒಂದಕ್ಕೆ ಕೊಟ್ಟಿರುವ ಮಾಹಿತಿಯನ್ನು ಆದರಿಸಿ ಪತ್ರ ಬರೆಯಿರಿ 1X5=5**

**44. ನಿಮ್ಮನ್ನು ಚಿಕ್ಕಮಗಳೂರಿನ ಸರ್ಕಾರಿ ಪ್ರೌಢಶಾಲೆಯ 'ಆರಾಧನಾ' ಎಂದು ಭಾವಿಸಿಕೊಂಡು, ತಾರಾಲಯದ ವೀಕ್ಷಣೆಗೆ ಸಮಯಾವಕಾಶ ಕೋರಿ ಬೆಂಗಳೂರಿನ ನೆಹರೂ ತಾರಾಲಯದ ವ್ಯವಸ್ಥಾಪಕರಿಗೆ ಮನವಿ ಪತ್ರ ಬರೆಯಿರಿ.**

ಅಥವಾ

ನಿಮ್ಮನ್ನು ಶಿವಮೊಗ್ಗದ ಸರ್ಕಾರಿ ಪ್ರೌಢಶಾಲೆಯ 'ಅಹನಿ' ಎಂದು ಭಾವಿಸಿಕೊಂಡು , 'ಗ್ರಂಥ ಸಪ್ತಾಹ 'ದ ಅಡಿಯಲ್ಲಿ ಹಮ್ಮಿಕೊಳ್ಳಲಾದ 'ಪುಸ್ತಕ ಪ್ರದರ್ಶನ' ಕಾರ್ಯಕ್ರಮಕ್ಕೆ ಆಹ್ವಾನಿಸಿ ಹಾಸನದ ವಿವೇಕಾನಂದ ನಗರದಲ್ಲಿ ವಾಸವಾಗಿರುವ 'ಯಜತ್' ಎಂಬ ಹೆಸರಿನ ಗೆಳೆಯನಿಗೆ ಪತ್ರವನ್ನು ಬರೆಯಿರಿ. (ವಿಷಯ ಶಿಕ್ಷಕರ ಸಹಾಯದಿಂದ ತರಗತಿಯಲ್ಲಿ ಅಭ್ಯಾಸ ಮಾಡುವುದು.)

**XV. ಕೆಳಗಿನ ಯಾವುದಾದರೂ ಒಂದು ವಿಷಯದಲ್ಲಿ 15 ವಾಕ್ಯಗಳಿಗೆ ಕಡಿಮೆ ಇಲ್ಲದಂತೆ ಪ್ರಬಂಧ ಬರೆಯಿರಿ 1X5=5**

**45 ಶಾಲೆಯಲ್ಲಿ ಮತದಾರ ಜಾಗೃತಿ ಕ್ಲಬ್ ನ ಚಟುವಟಿಕೆಗಳು**

**ಅಥವಾ**

**ಬಾಹ್ಯಾಕಾಶ ಯೋಜನೆಯಲ್ಲಿ ಭಾರತದ ಸಾಧಸನೆ.**

(ವಿಷಯ ಶಿಕ್ಷಕರ ಸಹಾಯದಿಂದ ತರಗತಿಯಲ್ಲಿ ಅಭ್ಯಾಸ ಮಾಡುವುದು.)

# ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಹೊಸಕೋಟೆ ತಾಲ್ಲೂಕು. ಬೆಂಗಳೂರು ಗ್ರಾಮಾಂತರ ಜಿಲ್ಲೆ

**ಪ್ರಶ್ನೋತ್ತರ ಪತ್ರಿಕೆ ಸಂಗ್ರಹ – 04**

## ಪ್ರಥಮ ಭಾಷೆ– ಕನ್ನಡ

**ಸಮಯ : 3 ಗಂಟೆ 15 ನಿಮಿಷ**

**10ನೇ ತರಗತಿ**

**ಒಟ್ಟು ಅಂಕಗಳು : 100**

**I. ಈ ಕೆಳಗಿನ ಪ್ರಶ್ನೆಗಳಿಗೆ ಅಥವಾ ಅಪೂರ್ಣ ಹೇಳಿಕೆಗಳಿಗೆ ನಾಲ್ಕು ಆಯ್ಕೆಗಳನ್ನು ನೀಡಲಾಗಿದೆ. ಅವುಗಳಲ್ಲಿ ಸೂಕ್ತವಾದಉತ್ತರವನ್ನು ಆರಿಸಿ ಕ್ರಮಾಕ್ಷರದೊಂದಿಗೆ ಬರೆಯಿರಿ.**

**1. ಮಳೆಗಾಲ ಪದವು ಈ ಸಂಧಿಗೆಉದಾಹರಣೆಯಾಗಿದೆ. 6x1=6**

(ಎ) ಲೋಪಸಂಧಿ (ಬಿ) ಆಗಮಸಂಧಿ

(ಸಿ) ಆದೇಶಸಂಧಿ (ಡಿ) ಗುಣಸಂಧಿ

**ಉತ್ತರ:** (ಸಿ )ಆದೇಶಸಂಧಿ

**2. ಒಬ್ಬರು ಹೇಳಿದ ಮಾತನ್ನೇಯಥಾವತ್ತಾಗಿ ಬರೆಯುವಾಗ ಬಳಸುವ ಲೇಖನ ಚಿಹ್ನೆ**

(ಎ) ಉದ್ಧರಣ ಚಿಹ್ನೆ (ಬಿ) ವಾಕ್ಯವೇಷ್ಟನ ಚಿಹ್ನೆ

(ಸಿ) ಆವರಣ ಚಿಹ್ನ (ಡಿ) ವಿವರಣಾತ್ಮಕ ಚಿಹ್ನೆ

**ಉತ್ತರ:** (ಎ) ಉದ್ಧರಣ ಚಿಹ್ನೆ

**3. ತಲೆನೋವು ಪದವು ಈ ಸಮಾಸಕ್ಕೆ ಉದಾಹರಣೆಯಾಗಿದೆ**

(ಎ) ತತ್ಪುರುಷ ಸಮಾಸ (ಬಿ) ಕ್ರಿಯಾಸಮಾಸ

(ಸಿ)ಅಂಶಿಸಮಾಸ (ಡಿ) ದ್ವಿಗುಸಮಾಸ

**ಉತ್ತರ:** (ಎ) ತತ್ಪುರುಷಸಮಾಸ

**4. 'ಸಾವಿತ್ರಿಯಲ್ಲಿ' ಈ ಪದದಲ್ಲಿರುವ ವಿಭಕ್ತಿಯ ಹೆಸರು**

(ಎ) ದ್ವಿತೀಯಾ (ಬಿ) ತೃತೀಯಾ

(ಸಿ) ಪಂಚಮೀ (ಡಿ) ಸಪ್ತಮೀ

**ಉತ್ತರ:** (ಡಿ) ಸಪ್ತಮೀ

**5. ಕನ್ನಡ ವರ್ಣಮಾಲೆಯಲ್ಲಿರುವ ಅನುನಾಸಿಕ ಅಕ್ಷರಗಳ ಸಂಖ್ಯೆ**

(ಎ) 02 (ಬಿ) 05 (ಸಿ) 06 (ಡಿ) 07

**ಉತ್ತರ:** (ಬಿ) 05

**6. ಸ್ವತಂತ್ರ ವಾಕ್ಯಗಳಾಗಿ ನಿಲ್ಲಬಲ್ಲ ಅನೇಕ ಉಪವಾಕ್ಯಗಳೊಡನೆ ಒಂದು ಪೂರ್ಣಾಭಿಪ್ರಾಯದ ವಾಕ್ಯವಾಗಿದ್ದರೆ ಅದು**

(ಎ) ಸಾಮಾನ್ಯವಾಕ್ಯ (ಬಿ) ಸಂಯೋಜಿತವಾಕ್ಯ

(ಸಿ ) ಮಿಶ್ರವಾಕ್ಯ (ಡಿ) ಪ್ರಶ್ನಾರ್ಥಕವಾಕ್ಯ

**ಉತ್ತರ:** (ಬಿ) ಸಂಯೋಜಿತವಾಕ್ಯ

**II. ಸಂಬಂಧೀ ಪದ ಬರೆಯುವುದು (ಪ್ರತಿ ಸರಿ ಉತ್ತರಕ್ಕೆ ಒಂದು ಅಂಕ) 4x1=4**

**7. ಮಕ್ಕಳುಮರಿ : ಜೋಡುನುಡಿ :: ಓಡಿಓಡಿ : ––––(ದ್ವಿರುಕ್ತಿ )**

**8. ವರ್ಷ : ವರುಸ :: ಕಾರ್ಯ : –––(ಕಜ್ಜ )**

**9. ತಿನ್ನುತ್ತೇನೆ : ವರ್ತಮಾನಕಾಲ : : ತಿನ್ನುವೆನು :––––––––– ( ಭವಿಷ್ಯತ್ ಕಾಲ )**

**10. ಮಾಡಲಿ : ವಿಧ್ಯರ್ಥಕ : : ಮಾಡಿಯಾರು :–––––––––– (ಸಂಭವನಾರ್ಥಕ )**

**III. ಈಕೆಳಗಿನ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ. 7x1=7**

**11. ರಾಮ ಲಕ್ಷ್ಮಣರಿಗೆ ಮತಂಗಾಶ್ರಮಕ್ಕೆ ಹೋಗಲು ಸೂಚಿಸಿದವರು ಯಾರು?**

**ಉತ್ತರ:** . ರಾಮ ಲಕ್ಷ್ಮಣರಿಗೆ ಮತಂಗಾಶ್ರಮಕ್ಕೆ ಹೋಗಲು ಸೂಚಿಸಿದವರು ಧನುಮಹರ್ಷಿ.

**12. ಯಾರ ಕಿವಿಗೆ ಉಪದೇಶನಾಟುವುದಿಲ್ಲ?**

**ಉತ್ತರ :** ಅಹಂಕಾರದಿಂದ ಕಿವಿ ಕಿವುಡಾದವರಿಗೆ ಉಪದೇಶನಾಟುವುದಿಲ್ಲ

**13. ಯಶೋಧರೆಯು ರತ್ನ ಕಂಬಳಿಗಳನ್ನು ಯಾರಿಗೆ ಕೊಟ್ಟಳು?**

**ಉತ್ತರ :** ಯಶೋಧರೆಯು ರತ್ನ ಕಂಬಳಿಗಳನ್ನು ತನ್ನ 32 ಜನ ಸೊಸೆಯರಿಗೆ ಕೊಟ್ಟಳು.

**14. ದುಷ್ಟಬುದ್ಧಿಯು ಧರ್ಮಬುದ್ಧಿಯ ಮೇಲೆ ಯಾವ ಆರೋಪವನ್ನು ಹೊರಿಸಿದನು?**

**ಉತ್ತರ :** ದುಷ್ಟಬುದ್ಧಿಯು ಧರ್ಮಬುದ್ಧಿಯ ಮೇಲೆ ಕಳ್ಳತನದ ಆರೋಪವನ್ನು ಹೊರಿಸಿದನು.

**15. ನದೀಜಲಗಳು ಏನಾಗಿವೆ?**

**ಉತ್ತರ :**. ನದೀಜಲಗಳು ಕಲುಷಿತವಾಗಿವೆ.

**16. ಆಶ್ವಯು ಜದಬತ್ತದ ಗದ್ದೆಯ ಬಣ್ಣ ಯಾವ ಹಸುರಿನಂತಿದೆ ?**

ಉತ್ತರ : ಆಶ್ವಯುಜದ ಬತ್ತದ ಗದ್ದೆಯ ಬಣ್ಣ ಗಿಳಿಯೆದೆ ಬಣ್ಣದ ಹಸುರಿನಂತಿದೆ.

**17. ಪುಟ್ಟಪೋರಿಯಅಮ್ಮಎಲ್ಲಿಮಲಗಿದ್ದಾಳೆ?**

**ಉತ್ತರ :** . ಪುಟ್ಟಪೋರಿಯ ಅಮ್ಮ ಗುಡಿಸಲಿನಲ್ಲಿ ಮಲಗಿದ್ದಾಳೆ.

**IV. ಕೆಳಗಿನ ಪ್ರಶ್ನೆಗಳಿಗೆ ಮೂರು ಅಥವಾ ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ. 10x2=20**

**18. ಲಂಡನ್ನಿನ ಹೆಣ್ಣು ಮಕ್ಕಳು ಯಾವ ಯಾವ ಕೆಲಸದಲ್ಲಿ ನಿಯುಕ್ತರಾಗಿರುತ್ತಾರೆ?**

**ಉತ್ತರ:** .ಲಂಡನ್ನಿನ ಎಲ್ಲ ಅಂಗಡಿಗಳಲ್ಲಿ ಸಾಮಾನ್ಯವಾಗಿ ಸ್ತ್ರೀಯರೇ ಕೆಲಸ ಮಾಡುತ್ತಾರೆ. ಉಪಹಾರ ಗೃಹಗಳಲ್ಲಿ ಕೆಲಸ ಮಾಡುವವರು ಸಹ ಹೆಣ್ಣು ಮಕ್ಕಳೆ. ಯಾವುದಾದರೊಂದು

ದೊಡ್ಡ ಅಂಗಡಿಗೆ ಹೋದರೆ ಟೈಪಿಸ್ಟ್ ಕಾರಕೂನ ಕೆಲಸದಲ್ಲಿ ಹೆಣ್ಣು ಮಕ್ಕಳೆನಿಯುಕ್ತರಾಗಿರುತ್ತಾರೆ. ಸಿನಿಮಾ ಗೃಹದಲ್ಲಿ ಜಾಗವನ್ನು ಹುಡುಕಿಕೊಡುವವರು ಸಹ ಹೆಣ್ಣುಮಕ್ಕಳೆ. ಹೆಣ್ಣುಮಕ್ಕಳನ್ನು ಅತ್ಯಾದರದಿಂದ ನಡೆಸಿಕೊಳ್ಳುವ ಸಂಸ್ಕೃತಿಯ ಶಿಖರವನ್ನು ಇಂಗ್ಲೆಂಡಿನಲ್ಲಿ ಕಾಣಬಹುದು.

**19. ವಿ.ಕೃ. ಗೋಕಾಕ್ ಅವರು ಟೊಪ್ಪಿಗೆಯ ವಿಶೇಷತೆಯನ್ನು ಹೇಗೆ ದಾಖಲಿಸಿದ್ದಾರೆ?**

**ಉತ್ತರ:** . ವಿ.ಕೃ. ಗೋಕಾಕ್ ಅವರುಲಂಡನ್ ನಗರದಲ್ಲಿ ಹೆಣ್ಣು ಮಕ್ಕಳ ಟೊಪ್ಪಿಗೆಯನ್ನು ಕುತೂಹಲದಿಂದ ನೋಡುತ್ತಾರೆ. ಒಂದು ಟೊಪ್ಪಿಗೆಯಂತೆ ಇನ್ನೊಂದಿರುವುದಿಲ್ಲ. ಸಿಕ್ಕಿಸಿದಪುಚ್ಚವಾದರೂ ಕನಿಷ್ಠಪಕ್ಷಕ್ಕೆ ಬೇರೆಯಾಗಿರುತ್ತದೆ! ಕೊಟ್ಯವದಿ ,ಟೊಪ್ಪಿಗೆಗಳನ್ನುಬೇಕಾದರೆ ಪರೀಕ್ಷಿಸಿ ಇದನ್ನು ಮನಗಾಣಬಹುದು. ಒಬ್ಬ ಮನುಷ್ಯಳಂತೆ ಇನ್ನೊಬ್ಬಳಿಲ್ಲ. ಹೀಗೆ ಅವರು ಟೊಪ್ಪಿಗೆಯ ವಿಶೇಷತೆಯನ್ನು ದಾಖಲಿಸಿದ್ದಾರೆ.

**20. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಯಾವ ಕ್ಷೇತ್ರಗಳು ಸ್ವಯಂ ಆಡಳಿತ ಕ್ಷೇತ್ರಗಳಾದವು?**

**ಉತ್ತರ :** ನಾಲ್ವಡಿ ಕೃಷ್ಣರಾಜ ಒಡೆಯರು ಸ್ಥಳೀಯ ಸಂಸ್ಥೆಗಳನ್ನು ರಚಿಸಿ ಆಡಳಿತವಿ ಕೇಂದ್ರೀಕರಣಕ್ಕೆ ಅನುವು ಮಾಡಿಕೊಟ್ಟರು. ನಗರಪಾಲಿಕೆಗಳು ಹಾಗೂ ಗ್ರಾಮ ಪಂಚಾಯಿತಿಗಳು ಕಾರ್ಯ ನಿರ್ವಹಿಸಲು ಆರಂಭ ಮಾಡಿದವು. ಇವರ ಕಾಲದಲ್ಲಿ ಗ್ರಾಮ ನೈರ್ಮಲೀಕರಣ, ವೈದ್ಯಕೀಯ ಸಹಾಯ, ವಿದ್ಯಾಪ್ರಚಾರ, ನೀರಿನ ಸೌಕರ್ಯ, ಪ್ರಯಾಣ ಸೌಲಭ್ಯ ಮುಂತಾದ ಕ್ಷೇತ್ರಗಳುಸ್ವಯಂ ಆಡಳಿತ ಕ್ಷೇತ್ರಗಳಾದವು.

**21. ನೆಹರೂ ಅವರು ವಿಶ್ವೇಶ್ವರಯ್ಯ ಅವರ ಬಗ್ಗೆ ಹೇಳಿರುವ ಮಾತುಗಳಾವುವು?**

"ದುರದೃಷ್ಟವಶಾತ್ ಭಾರತೀಯರಾದ ನಾವು ಹೆಚ್ಚುಮಾತ ನಾಡುವವರು ಮತ್ತುನುಡಿದಂತೆ ನಡೆಯಲಾರದ ವರೆಂಬ ದೂಷಣೆಗೆ ಒಳಗಾಗಿದ್ದೇವೆ. ತಾವು ಈ ಮಾತಿಗೆ ಬಹು ದೊಡ್ಡರೀತಿಯಲ್ಲಿ ಹೊರತಾಗಿದ್ದೀರಿ. ತಾವು ಕಡಿಮೆ ಮಾತನಾಡಿದ್ದೀರಿ; ಹೆಚ್ಚುಕೆಲಸಮಾಡಿದ್ದೀರಿ. ಅದನ್ನು ನಾವು ತಮ್ಮಿಂದ ಕಲಿಯೋಣ" ಎಂದು ನೆಹರೂರವರು ವಿಶ್ವೇಶ್ವರಯ್ಯ ಅವರ ಬಗ್ಗೆಹೇಳಿದ್ದಾರೆ.

**22. ಹಲಗಲಿಗೆ ದಂಡು ಬರಲು ಕಾರಣವೇನು?**

ವ್ಯಾಪಾರಕ್ಕಾಗಿ ಬಂದ ಬ್ರಿಟೀಷರು 1857 ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಅನಂತರ ಭಾರತೀಯರ ಮೇಲೆ ನಿಶ್ಶಸ್ತ್ರೀಕರಣ ಆದೇಶವನ್ನು ಜಾರಿಗೆ ತಂದರು. ಈ ಆದೇಶವನ್ನು ವಿರೋಧಿಸಿ ಹಲಗಲಿ ಬೇಡರು ಪೂಜೇರಿ ಹನುಮಾ, ಬ್ಯಾಡರ ಬಾಲ, ಜಡಗ, ರಾಮ ಮೊದಲಾದ ವೀರರನಾಯಕತ್ವದಲ್ಲಿ ಸಭೆ ಸೇರಿ, ತಮ್ಮ ಜೀವನಾಧಾರವಾಗಿದ್ದ ಆಯುಧಗಳನ್ನು ಕೊಡಲೊಪ್ಪದೆ ದಂಗೆ ಎದ್ದು, ಕಾರಕೂನನಕ ಪಾಳಕ್ಕೆ ಬಡಿದು ಮುಂಗಾರಿನ ಸಿಡಿಲುಸಿಡಿದ ಹಾಗೆ ಗುಂಡು ಹೊಡೆದರು. ಇದರಿಂದ ಕ್ರೋಧಗೊಂಡ ಬ್ರಿಟಿಷ್ ಅಧಿಕಾರಿ ದಂಗೆ ಎದ್ದವರನ್ನು ಬಗ್ಗು ಬಡಿಯಲು. ಹಲಗಲಿಗೆ ದಂಡನ್ನು ಕಳುಹಿಸಿದನು.

**23. ಕೃಷ್ಣನು ಕೌರವೇಂದ್ರನನ್ನು ಕೊಂದನು ಎಂದು ಕರ್ಣ ಹೇಳಲು ಕಾರಣವೇನು?**

ಕರ್ಣನಿಗೆ ಕೃಷ್ಣನಿಗೆ ಮರುಳು ಮಾಧವ ನಾನು ರಾಜ್ಯದ ಸಿರಿ ಸಂಪತ್ತಿಗೆ ಸೋಲುವವನಲ್ಲ, ಪಾಂಡವರು, ದುರ್ಯೋಧನರು ನನ್ನ ಸೇವೆಯನ್ನು ಮಾಡುವುದು ಇಷ್ಟವಿಲ್ಲ. ನನ್ನನ್ನು ಕಾಪಾಡಿದ ನನ್ನ ಒಡೆಯನಾದ, ದುರ್ಯೋಧನನಿಗೆ ಶತ್ರುಗಳ ಶಿರವನ್ನು ಕಡಿದು ತಂದು ಒಪ್ಪಿಸಬೇಕೆಂಬ ಆವೇಶದಲ್ಲಿ ಇದ್ದೆನು. ಆದರೆ ನೀನು ನನ್ನ ಜನ್ಮ ರಹಸ್ಯವನ್ನು ತಿಳಿಸಿ ಕೌರವೇಂದ್ರನನ್ನು ಕೊಂದೆ ಎಂದು ಹೇಳಿದನು.

**24. ವಿವೇಕಾನಂದರ ದೃಷ್ಟಿಯಲ್ಲಿ ದೇಶದ ಪ್ರಗತಿ ಸ್ಥಿರವಾಗುವುದು ಯಾವಾಗ?**

ದೇಶದ ಭಾಷೆಯಲ್ಲಿ ಭಾವನೆಗಳನ್ನು ನೀಡಬೇಕು. ಅವರು ವಿಷಯ ಗ್ರಹಣ ಮಾಡಿಕೊಳ್ಳುವರು. ಅದರೊಂದಿಗೆ ಸಂಸ್ಕೃತಿಯನ್ನು ನೀಡಬೇಕು. ಸಂಸ್ಕೃತಿಗೆ ಮಾತ್ರ ಆಘಾತವನ್ನು ಸಹಿಸುವ ಶಕ್ತಿ ಇದೆ. ಕೇವಲಜ್ಞಾನರಾಶಿಗೆ ಅದನ್ನು ಎದುರಿಸುವ ಶಕ್ತಿ ಇಲ್ಲ. ಸಂಸ್ಕೃತಿಯು ರಕ್ತದಲ್ಲಿ ಹರಿಯಬೇಕು. ಆಧುನಿಕ ಕಾಲದಲ್ಲಿಬೇಕಾದಷ್ಟು ಜ್ಞಾನ ಸಂಪತ್ತನ್ನು ಪಡೆದ ದೇಶಗಳನ್ನು ನೋಡಿರುವೆವು. ಅದರಿಂದ ಏನು ಪ್ರಯೋಜನವಿಲ್ಲ. ಅವರು ಕಾಡು ಜನರಂತೆ ಇರುವರು. ಅವರಲ್ಲಿ ಸಂಸ್ಕೃತಿ ಇಲ್ಲ. ಸಂಸ್ಕೃತಿಯನ್ನು ಕೊಟ್ಟಾಗ ಮಾತ್ರ ದೇಶದ ಪ್ರಗತಿ ಸ್ಥಿರವಾಗುವುದು ಎಂಬುವುದು ವಿವೇಕಾನಂದರ ಅಭಿಪ್ರಾಯವಾಗಿದೆ.

**25. ವಸಂತ ಮುಖ ತೋರಲಿಲ್ಲ ಕವನದಲ್ಲಿ ಪ್ರಕೃತಿಯ ಸಂಭ್ರಮ ಹೇಗೆ ವ್ಯಕ್ತವಾಗಿದೆ?**

**2020ರ ಪತ್ರಿಕೆಯಲ್ಲಿ ಈ ಪ್ರಶ್ನೆಗೆ ಉತ್ತರ ಇರುತ್ತದೆ.**

**26. ಇಂದು ಬದುಕು ಲಂಗು ಲಗಾಮಿಲ್ಲದ ಓಟಕಿತ್ತಿದಂತಾಗಿದೆ ಹೇಗೆ ವಿವರಿಸಿ.**

ಹಬ್ಬವೆಂದರೆ ಖರೀದಿ. ಹಬ್ಬದ ಸಾಲ ಹನುಮಂತನ ಬಾಲವಾಗಿ ಬೆಳೆಯುತ್ತಿದೆ. ಸರಳ ಬದುಕು ಆದರ್ಶವಾಗಿದ್ದ ನೆಲದಲ್ಲಿ ಆಡಂಬರ, ರಂಗು, ನಾಟಕೀಯತೆ ಸೇರಿಕೊಂಡು ಇಂದುಬದು ಕುಲಂಗುಲಗಾಮಿಲ್ಲದ ಓಟಕಿತ್ತಿದಂತಾಗಿದೆ ಎಂದು ಲೇಖಕರು ವಿವರಿಸಿದ್ದಾರೆ. ಸಂಪ್ರದಾಯ ದೇವರ ನಂಬಿಕೆಗಳಿಗಿಂತ ಹಬ್ಬಗಳು ಖರೀದಿಯ ಸವಾಲು ಒಡ್ಡಿ ಮನೆ ಮನಗಳನ್ನು ಕಾಡುತ್ತಿವೆ. ಆಚರಣೆಯ ಶ್ರದ್ಧೆ ಮರೆಯಾಗಿ ಖರೀದಿ ವಿಜೃಂಭಿಸಿದೆ.

**27. ಪ್ರಾಸ ಬಿಡಬೇಕೆಂದು ನಿರ್ಧರಿಸಿದ ಬಳಿಕ ಪೈಗಳು ಯಾವ ಕೃತಿಯನ್ನು ಬರೆದರು?**

ಪ್ರಾಸ ಬಿಡಬೇಕೆಂದು ನಿರ್ಧರಿಸಿದ ಬಳಿಕ ಪೈಗಳು ರವೀಂದ್ರನಾಥ ಠಾಕೂರರ 'ಅಯಿಭುವನ ಮನೋ ಮೋಹಿನಿ' ಎಂದು ಮೊದಲಾಗುವ 'ಭಾರತಲಕ್ಷ್ಮೀ' ಎಂಬ ಬಂಗಾಳಿ ಗೀತೆಯನ್ನು ಕನ್ನಡಿಸಿದರು. ಆಮೇಲೆ 'ಶಿಶು' ಎಂಬ ಗ್ರಂಥದಲ್ಲಿಯ ಅವರದೇ 'ವಿದಾಯ' ಎಂಬ ಕವಿತೆಯನ್ನು, ಅನಂತರಶೇಖ್ ಮೊಹಮ್ಮದ್ ಇಕ್ಬಾಲರ 'ಹಿಂದೂಸ್ಥಾನ್ ಹಮಾರಾ' ಎಂಬ ಉರ್ದು ಗೀತವನ್ನು ಕನ್ನಡಿಸಿದರು.

**V. ಕವಿಗಳ/ ಸಾಹಿತಿಗಳಜನ್ಮಸ್ಥಳ, ಕಾಲ, ಕೃತಿಮತ್ತುಬಿರುದು/ ಪ್ರಶಸ್ತಿಗಳನ್ನು ಕುರಿತು ವಾಕ್ಯರೂಪದಲ್ಲಿ ಬರೆಯುವುದು. 2x3=6**

**28. ಡಾ. ಬನ್ನಂಜೆ ಗೋವಿಂದಾ ಚಾರ್ಯ:**

ಇವರು 1936 ರ ಆಗಸ್ಟ್ 3 ರಂದು ಉಡುಪಿಯಲ್ಲಿ ಜನಿಸಿದರು. ಇವರ ತಂದೆ ಪಡುಮನ್ನೂರು ನಾರಾಯಣ–ಆಚಾರ್ಯ. ಇವರು ಬಹು ದೊಡ್ಡ ಸಂಸ್ಕೃತ–ಕನ್ನಡ ವಿದ್ವಾಂಸರು. ಸಂಸ್ಕೃತದಲ್ಲಿ 30, ಕನ್ನಡದಲ್ಲಿ 130 ಕೃತಿಗಳನ್ನು ರಚಿಸಿದ್ದಾರೆ. ವಿದ್ಯಾವಾಚಸ್ಪತಿ ಎಂಬುದು ಅವರ ಪಾಂಡಿತ್ಯಕ್ಕೆ ಸಂದಬಿರುದಾಗಿದೆ. ಇವರ ಪ್ರಮುಖ ಕೃತಿಗಳು, ಕಾದಂಬರಿ ನೆನಪಾದಳು ಶಕುಂತಲೆ, ಮಹಾಶ್ವೇತೆ, ಭಗವಂತನನಲ್ನುಡಿ, ಮುಗಿಲ ಮಾತು ಮುಂತಾದವು. ಇವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪದ್ಮಶ್ರೀ ಮುಂತಾದ ಪ್ರಶಸ್ತಿಗಳು ದೊರೆತಿವೆ.

**29. ಕುಮಾರ ವ್ಯಾಸ:**

ಕುಮಾರವ್ಯಾಸನೆಂದೇ ಪ್ರಸಿದ್ಧನಾಗಿರುವ ಗದುಗಿನ ನಾರಾಣಪ್ಪ ಸಾ.ಶ. 1430ರಲ್ಲಿ ಗದಗ ಪ್ರಾಂತ್ಯದ ಕೋಳಿವಾಡದಲ್ಲಿ ಜನಿಸಿದರು. ವ್ಯಾಸರ ಮಹಾಭಾರತದ ಹತ್ತು ಪರ್ವಗಳನ್ನು ಕನ್ನಡದಲ್ಲಿ ರಚಿಸಿರುವುದರಿಂದ ಕುಮಾರವ್ಯಾಸನೆಂಬ ಗೌರವಕ್ಕೆ ಪಾತ್ರನಾದನು. ಗದುಗಿನ ಭಾರತ ಈತನ ಪ್ರಸಿದ್ಧ ಕೃತಿಯಾಗಿದೆ. ಐರಾವತ ಎಂಬ ಕೃತಿಯನ್ನು ರಚಿಸಿದ್ದಾನೆಂದು ತಿಳಿದು ಬಂದಿದೆ. ರೂಪಕ ಅಲಂಕಾರವನ್ನು ನಿರರ್ಗಳವಾಗಿ ಬಳಸಿರುವುದರಿಂದ ರೂಪಕ ಸಾಮ್ರಾಜ್ಯ ಚಕ್ರವರ್ತಿ ಎಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ.

**VI. ಈ ಕೆಳಗಿನ ಪದ್ಯ ಭಾಗಕ್ಕೆ ಪ್ರಸ್ತಾರಹಾಕಿ, ಗಣ ವಿಭಾಗಿಸಿ ಛಂದಸ್ಸಿನ ಹೆಸರು ತಿಳಿಸಿ. 1x3=3**

**30. ಏನುಹೇಳೈಕರ್ಣಚಿತ್ತ**

ಗ್ಲಾನಿಯಾವುದುಮನಕೆಕುಂತೀ

ಸೂನುಗಳಬೆಸಕೈಸಿಕೊಂಬುದುಸೇರದೇನಿನಗೆ

| | | | | |
|---|---|---|---|---|
| 3 | 4 | 3 | 4 | |
| __U | — – | __U | _ U | = 14 |
| ಏ ನು | ಹೇಳ್ಳೈ | ಕರ್ಣ | ಚಿತ್ತ | |

| | | | | |
|---|---|---|---|---|
| 3 | 4 | 3 | 4 | |
| _ U | _UU | UUU | _ _ | =14 |
| ಗ್ಲಾನಿ | ಯಾವುದು | ಮನಕೆ | ಕುಂತೀ | |

| | | | | | | | |
|---|---|---|---|---|---|---|---|
| 3 | 4 | 3 | 4 | 3 | 4 | 2 | |
| _ U | UU UU | _U | _ U U | __U | _UU | __ | =23 |
| ಸೂನು | ಗಳಬೆಸ | ಕೈಸಿ | ಕೊಂಬುದು | ಸೇರ | ದೇನಿನ | ಗೆ | |

ಮಾತ್ರಾಗಣ: ಭಾಮಿನಿಷಟ್ಪದಿ

**VII. ಅಲಂಕಾರವನ್ನು ಹೆಸರಿಸಿ, ಲಕ್ಷಣ ಬರೆದು ಸಮನ್ವಯಗೊಳಿ 1x3=3**

ಭೀಮದುರ್ಯೋಧನರುಮದಗಜಗಳಂತೆಹೋರಾಡಿದರು.

ಅಲಂಕಾರದಹೆಸರು : ಉಪಮಾಲಂಕಾರ

**ಲಕ್ಷಣ** : ಎರಡುವಸ್ತುಗಳಿಗೆಪರಸ್ಪರವಾಗಿಇರುವಹೋಲಿಕೆಯನ್ನುಹೇಳುವುದೇಉಪಮಾಲಂಕಾರ

ಸಮನ್ವಯ : ಉಪಮೇಯ : ಭೀಮದುರ್ಯೋಧನರು

ಉಪಮಾನ : ಮದಗಜಗಳು

ಉಪಮಾವಾಚಕಪದ : ಅಂತೆ

ಸಮಾನಧರ್ಮ : ಹೋರಾಟ

ಇಲ್ಲಿ ಉಪಮೇಯವಾದ 'ಭೀಮ ದುರ್ಯೋಧನರನ್ನು' ಉಪಮಾನವಾದ 'ಮದಗಜಗಳಿಗೆ' ಹೋಲಿಸಲಾಗಿದೆ. 'ಅಂತೆ' ಎಂಬ ಉಪಮಾವಾಚಕಪದವಿದ್ದು 'ಹೋರಾಟ' ಎಂಬ ಸಮಾನ ಧರ್ಮ ಇರುವುದರಿಂದ ಇದು ಪೂರ್ಣೋಪಮಾಲಂಕಾರವಾಗಿದೆ.

**VIII. ಕೆಳಗೆ ಕೊಟ್ಟಿರುವ ಗಾದೆ ಮಾತುಗಳಲ್ಲಿ ಯಾವುದಾದರು ಒಂದನ್ನು ಆರಿಸಿಕೊಂಡು ವಿಸ್ತರಿಸಿ ಬರೆಯಿರಿ. (ವಿಷಯ ಶಿಕ್ಷಕರ ಸಹಾಯದಿಂದ ಅಭ್ಯಾಸ ಮಾಡುವುದು) 1x3=3**

**32.** ಮಾತೇ ಮುತ್ತು, ಮಾತೇ ಮೃತ್ಯು

ಅಥವಾ

ಕೂಡಿ ಬಾಳಿದರೆ ಸ್ವರ್ಗ ಸುಖ

**IX. ಕೆಳಗಿನ ವಾಕ್ಯ ಅಥವಾ ಹೇಳಿಕೆಗಳಿಗೆ ಸಂದರ್ಭ ಮತ್ತು ಸ್ವಾರಸ್ಯಗಳನ್ನು ಬರೆಯಿರಿ. 6x3=18**

**33. "ತಾಯಿ ದಾರಿಗರಿಗೆ ಬೀಡಿಲ್ಲಿ ದೊರೆಯುವುದೇ ?"**

**ಆಯ್ಕೆ :** ಪ್ರಸ್ತುತ ವಾಕ್ಯವನ್ನು ಶ್ರೀರಂಗ ಮತ್ತು ನಾ.ಕಸ್ತೂರಿಸಂಪಾದಿಸಿರುವ 'ಏಕಾಂಕ ನಾಟಕಗಳು' ಕೃತಿಯಿಂದ ಆಯ್ದ ಪು.ತಿ. ನರಸಿಂಹಾಚಾರ್ ಅವರು ರಚಿಸಿರುವ' ಶಬರಿ 'ಗೀತನಾಟಕ ದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ:** ಶ್ರೀರಾಮನನ್ನು ಕಾಣುವುದೇ ಜೀವನದ ಏಕೈಕ ಗುರಿ ಎಂದು ಭಾವಿಸಿದ್ದ ಶಬರಿ ರಾಮಧ್ಯಾನದಲ್ಲಿ ತೊಡಗಿ, ರಾಮನಿಗೆಂದು ಆರಿಸಿ ತಂದ ಈಗ ಬಾಡಿ ಹೋಗಿರುವ ಹೂ, ಹಣ್ಣು ತಳಿರುಗಳನ್ನು ವಿಂಗಡಿಸುತ್ತಾ, ಅವುಗಳ ಜಾಗದಲ್ಲಿ ಹೊಸದನ್ನು ಇಡುತ್ತಾ ಹೂ ಮಾಲೆಯನ್ನು ಕಟ್ಟಿ, ಮುತ್ತಿಟ್ಟು, ಹಾಡುತ್ತಾ ಮತಂಗಾಶ್ರಮದಲ್ಲಿ ಇರುತ್ತಾಳೆ. ಇದೇ ಸಮಯದಲ್ಲಿ ತಪಸ್ವಿಯಾದದನು ವಿನಸೂಚನೆಯಂತೆ ರಾಮಲಕ್ಷ್ಮಣರು ಮತಂಗಾಶ್ರಮ ಪ್ರವೇಶಿಸುತ್ತಾರೆ. ಆಗ ತನಗಾಗಿ ಹಂಬಲಿಸುತ್ತಿರುವ ಶಬರಿಯನ್ನು ಕಂಡ ರಾಮನು ಈ ಮಾತನ್ನು ಹೇಳುತ್ತಾನೆ.

**ಸ್ವಾರಸ್ಯ** : ಶಬರಿಯ ತಾಳ್ಮೆ, ಶ್ರೀರಾಮನನ್ನು ಕಾಣಬೇಕೆಂಬ ಹಂಬಲ, ಕಾತುರ, ಶ್ರೀರಾಮನ ಸರಳ ಸಜ್ಜನಿಕೆ, ಹಿತ–ಮಿತ ಮೃದುವಚನ, ಲಕ್ಷ್ಮಣನ ವಿನಯದ ಸಹಚರತೆ ಇಲ್ಲಿ ಮನೋಜ್ಞವಾಗಿ ಮೂಡಿ ಬಂದಿದೆ.

**34. "ನಮ್ಮ ನಾಳ್ವರು ಮೊಳರೆ ಎಂದು ವಿಸ್ಮಯಂಬಟ್ಟು"**

**ಆಯ್ಕೆ :** ಈ ಮಾತನ್ನು ಡಾ. ಡಿ.ಎಲ್. ನರಸಿಂಹಾಚಾರ್ ಅವರು ಸಂಪಾದಿಸಿರುವ ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ ಕೃತಿಯಿಂದ ಆರಿಸಿರುವ ಸುಕುಮಾರಸ್ವಾಮಿಯ ಕಥೆ ಎಂಬ ಗದ್ಯಾಭಾಗದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ:** ಯಶೋಭದ್ರೆಯ ಐಶ್ವರ್ಯವನ್ನು ಕಾಣಲು

ಬಂದ ವೃಷಭಾಂಕನೆಂಬ ಅರಸನು ಯಶೋಭದ್ರೆಯನ್ನು ಸುಕುಮಾರನೆಲ್ಲಿದ್ದಾನೆಂದು ಕೇಳಿದಾಗ, ತಾಯಿಯ ಶೋಭದ್ರೆಯು ಮಗನನ್ನು ಕರೆಯಲು ಹೋಗುತ್ತಾಳೆ. ಆ ಸಂದರ್ಭದಲ್ಲಿ ಸುಕುಮಾರನು ತಾಯಿಯನ್ನು ಈ ರೀತಿ ಪ್ರಶ್ನಿಸುತ್ತಾನೆ.

**ಸ್ವಾರಸ್ಯ :** ಏನನ್ನು ಅರಿಯದ ಸುಕುಮಾರಸ್ವಾಮಿಯ ಕೋಮಲ ಸ್ವಭಾವವನ್ನು, ತಾಯಿಯನ್ನು ಚಿಕ್ಕ ಮಗುವಿನಂತೆ ಪ್ರಶ್ನಿಸುವುದನ್ನು ಲೇಕಖರು ಮನಮುಟ್ಟುವಂತೆ ವರ್ಣಿಸಿರುವುದು ಸ್ವಾರಸ್ಯಕರವಾಗಿದೆ.

**35. 'ಹುಸಿಯದ ಬೇಹಾರಿಯೆ ಇಲ್ಲ"**

**ಆಯ್ಕೆ :** ಪ್ರಸ್ತುತ ಈ ವಾಕ್ಯವನ್ನು ದುರ್ಗ ಸಿಂಹಕ ವಿರಚಿಸಿರುವ 'ಕರ್ಣಾಟಕ ಪಂಚ ತಂತ್ರಂ' ಕೃತಿಯಿಂದ ಆರಿಸಿರುವ 'ವೃಕ್ಷಸಾಕ್ಷಿ' ಎಂಬ ಗದ್ಯಪಾಠದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ :** ಧರ್ಮಬುದ್ಧಿಯು ಹೊನ್ನನ್ನೆಲ್ಲ ತೆಗೆದುಕೊಂಡಿದ್ದಾನೆ ಎಂಬ ಮಾತನ್ನು ಕೇಳಿದ ಧರ್ಮಬುದ್ಧಿಯುದುಷ್ಟ ಬುದ್ಧಿಯ ಕುತಂತ್ರವನ್ನುಬಯಲಿಗೆಳೆಯುವುದಕ್ಕಾಗಿ,ವ್ಯಾಪಾರಿಯಾದವನು ಸುಳ್ಳು ಹೇಳುವುದು ಸಹಜ ಎಂದು ಹೇಳುತ್ತ ತಾನು ಹೊನ್ನನ್ನು ಕದ್ದು ಮರದ ಪೊಟರೆಯಲ್ಲಿ ಇಟ್ಟಿರುವುದಾಗಿಯೂ, ಹಣವನ್ನು ಸುತ್ತಿಕೊಂಡಿದ್ದ ಸರ್ಪವನ್ನುಹೊಗೆ ಇಟ್ಟು ಓಡಿಸಿ ಹೊನ್ನು ತಂದು ಕೊಡುವುದಾಗಿ ಹೇಳುವಸಂದರ್ಭದಲ್ಲಿ ಈ ಮಾತು ಬಂದಿರುತ್ತದೆ.

**ಸ್ವಾರಸ್ಯ :** ದುಷ್ಟಬುದ್ಧಿಯ ತಂತ್ರ ಅವನಿಗೆ ತಿರುಗು ಬಾಣ ವಾಗುವಂತೆ ಮಾಡುವ ಧರ್ಮಬುದ್ಧಿಯ ಜಾಣ್ಮೆ ಹಾಗೂ ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು ಎಂಬ ಗಾದೆಯಂತೆ ದುಷ್ಟ ಬುದ್ಧಿಯ ದುರ್ಗುಣವನ್ನು ಹೊರ ತರಲು ಹೂಡಿದ ಉಪಾಯ ಸ್ವಾರಸ್ಯಕರವಾಗಿದೆ.

**36. "ಪ್ರೀತಿಯ ಹಣತೆಯ ಹಚ್ಚೋಣ"**

**ಆಯ್ಕೆ :** ಈ ಮಾತನ್ನು ಜಿ.ಎಸ್. ಶಿವರುದ್ರಪ್ಪನವರು ಬರೆದಿರುವ 'ಎದೆ ತುಂಬಿ ಹಾಡಿದೆನು' ಕವನ ಸಂಕಲನದಿಂದ ಆರಿಸಿರುವ ಸಂಕಲ್ಪಗೀತೆ ಎಂಬ ಪದ್ಯಭಾಗದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ :** ನಮ್ಮ ಸುತ್ತಲೂ ಕವಿದಿರುವ ಅಜ್ಞಾನವೆಂಬ ಕತ್ತಲೆಯನ್ನು ಕಳೆಯುವುದಕ್ಕಾಗಿ ದೃಢನಿಷ್ಠೆಯಿಂದ ಸ್ವಾಸ್ಥ್ಯದನೆಲೆಯಾಗಿಸುವ ಹಣತೆ ಹಚ್ಚಿದಾಗ ಕತ್ತಲೆ ದೂರವಾಗುತ್ತದೆ. ಆ ಮೂಲಕ ಭಯ ಮತ್ತು ಅನುಮಾನ ಆವರಿಸಿರುವ ಸಮಾಜವನ್ನು ನಿರ್ಮೂಲನೆ ಮಾಡಬಹುದು. ಹೀಗೆ ಸಂಕಲ್ಪ ಮತ್ತು ಅನುಷ್ಠಾನ ಕುರಿತು ತಮ್ಮ ಅಭಿಪ್ರಾಯವನ್ನು ತಿಳಿಸುವ ಸಂದರ್ಭದಲ್ಲಿ ಕವಿ ಈ ಮಾತನ್ನುಹೇಳಿದ್ದಾರೆ.

**ಸ್ವಾರಸ್ಯ :** ಜೀವನದಲ್ಲಿ ಧನಾತ್ಮಕಭಾವನೆಯನ್ನು ದೃಢ ಸಂಕಲ್ಪವನ್ನು ಹೊಂದಿರಬೇಕು. ಪ್ರೀತಿಯ ಹಣತೆಯ ಮೂಲಕ ಮನದ ಕತ್ತಲೆಯನ್ನು ಹೋಗಲಾಡಿಸಬೇಕು ಎಂಬ ಸಂದೇಶ ಸ್ವಾರಸ್ಯವಾಗಿ ವ್ಯಕ್ತಗೊಂಡಿದೆ.

**37. "ಎಲ್ಲ ಜನರಿಗೆ ಜೋರ ಮಾಡಿಕಸಿದುಕೊಳ್ಳಿರಿಹತಾರ"**

**ಆಯ್ಕೆ :** ಪ್ರಸ್ತುತ ಈ ವಾಕ್ಯವನ್ನುಡಾ.ಬಿ.ಎಸ್.ಗದ್ದಗಿ ಮಠರವರು ಸಂಪಾದಿಸಿರುವ ಕನ್ನಡ ಜನಪದ ಗೀತೆಗಳು ಕೃತಿಯಿಂದ ಆರಿಸಿರುವ 'ಹಲಗಲಿಬೇಡರು' ಎಂಬ ಪದ್ಯಪಾಠದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ :** ಬ್ರಿಟೀಷರು 1857 ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ನಂತರ ಭಾರತೀಯರ ಬಳಿ ಇರುವ ಆಯುಧಗಳನ್ನು ವಶಪಡಿಸಿಕೊಳ್ಳುವ ಸಲುವಾಗಿ ನಿಶ್ಶಸ್ತ್ರೀಕರಣ ಕಾಯಿದೆಯನ್ನು ಜಾರಿಗೆ ತಂದರು. ಇದನ್ನು ವಿರೋಧಿಸಿ ಹಲಗಲಿ ಬೇಡರುದಂಗೆ ಎದ್ದರು. ದಂಗೆಯನ್ನು ನಿಯಂತ್ರಿಸುವ ಸಂದರ್ಭದಲ್ಲಿ, ಆದೇಶಿಸುವಾಗ ಕಂಪನಿ ಸರಕಾರ ಈ ಮಾತನ್ನು ಹೇಳುತ್ತ,ದೆ.

**ಸ್ವಾರಸ್ಯ :** ಬ್ರಿಟೀಷರು ಹೊಸ ಹೊಸ ಕಾಯಿದೆಗಳನ್ನು ಜಾರಿಗೆ ತರುವುದರ ಮೂಲಕ ಭಾರತೀಯರ ಮೇಲೆ ನಿರಂತರವಾಗಿದ ಬ್ಬಾಳಿಕೆಯನ್ನು, ದೌರ್ಜನ್ಯಗಳನ್ನು ಎಸಗುತ್ತಿದ್ದರು ಎಂಬುದನ್ನುಇಲ್ಲಿ ಅತ್ಯಂತ ಗಂಭೀರವಾಗಿ ವ್ಯಕ್ತಪಡಿಸಲಾಗಿದೆ.

**38. "ಹಸುರತ್ತಲ್, ಹಸುರಿತ್ತಲ್, ಹಸುರೆತ್ತಲ್"**

**ಆಯ್ಕೆ :** ಪ್ರಸ್ತುತ ಈ ಮಾತನ್ನು ಕವಿ ಕುವೆಂಪುರವರು ಬರೆದಿರುವ ಪಕ್ಷಿಕಾಶಿ ಎಂಬ ಕವನ ಸಂಕಲನದಿಂದ ಆರಿಸಿರುವ 'ಹಸುರು' ಎಂಬ ಪದ್ಯಭಾಗದಿಂದ ಆರಿಸಲಾಗಿದೆ.

**ಸಂದರ್ಭ :** ಅಶ್ವಯುಜ ಮಾಸದ ನವರಾತ್ರಿಯಲ್ಲಿ ಪ್ರಕೃತಿಯಲ್ಲಿ ಹೆಪ್ಪುಗಟ್ಟಿದ ಸೌಂದರ್ಯವನ್ನು ಕಂಡು ಕವಿ ಕುವೆಂಪುರವರು ಪ್ರೇರಿತರಾಗಿ ಈ ಕವನವನ್ನು ತಮ್ಮ ಕವಿ ಶೈಲದಲ್ಲಿ ರಚಿಸಿದ್ದು, ಎಲ್ಲಡೆ ಹಸುರು ಕಾಣುವಾಗ ಈ ಮಾತನ್ನು ವರ್ಣಿಸಿರುತ್ತಾರೆ.

**ಸ್ವಾರಸ್ಯ :** ಕವಿಹಾಗುಪ್ರಕೃತಿಒಂದಾಗುವಅದ್ವೈತಸ್ಥಿತಿಯನ್ನು, ಪ್ರಕೃತಿಯರಸಸ್ವಾದನೆಹಾಗೂಕವಿಕುವೆಂಪುರವರುಪ್ರಕೃತಿಯೊಂದಿಗೆಹೊಂದಿದ್ದಅವಿನಾಭಾವಸಂಬಂಧವು ಈ ಪದ್ಯದಲಿಬಿಂಬಿತವಾಗಿದೆ.

**X. ಕೆಳಗಿನ ಪದ್ಯ ಭಾಗವನ್ನು ಪೂರ್ಣಗೊಳಿಸಿ ಬರೆಯಿರಿ. 1x4=4**

39. ನೀಲ ಮೇಘ ಮಂಡಲ____________ ಯುಗ– ಯುಗಗಳ ________________________

____________________________________

ಅಥವಾ

____________________________________

____________________________________

ಹಕ್ಕಿ ಹಾರುತಿದೆ ನೋಡಿದಿರಾ! ಹಕ್ಕಿ ಹಾರುತಿದೆ ನೋಡಿದಿರಾ!

**ಉತ್ತರ:**

ನೀಲ ಮೇಘ ಮಂಡಲ ಸಮ ಬಣ್ಣ
ಮುಗಿಲಿಗೆ ರೆಕ್ಕೆಗಳೊಡೆದವೊ ಅಣ್ಣಾ
ಚಿಕ್ಕೆಯ ಮಾಲೆಯ ಸೆಕ್ಕಿಸಿಕೊಂಡು
ಸೂರ್ಯ–ಚಂದ್ರರನು ಮಾಡಿದೆ ಕಣ್ಣಾ
ಹಕ್ಕಿ ಹಾರುತಿದೆ ನೋಡಿದಿರಾ!

ಅಥವಾ

ಯುಗ– ಯುಗಗಳ ಹಣೆ ಬರಹವ ಒರಸಿ
ಅಥವಾ ಮನ್ವಂತರಗಳ ಭಾಗ್ಯವ ತೆರೆಸಿ
ರೆಕ್ಕೆಯ ಬೀಸುತ ಚೇತನಗೊಳಿಸಿ
ಹೊಸಗಾಲದ ಹಸು ಮಕ್ಕಳ ಹರಸಿ
ಹಕ್ಕಿ ಹಾರುತಿದೆ ನೋಡಿದಿರಾ!

**X.I ಪದ್ಯ ಭಾಗವನ್ನು ಓದಿ, ಅರ್ಥ ಮಾಡಿಕೊಂಡು, ಅಡಕವಾಗಿರುವ ಮೌಲ್ಯವನ್ನಾಧರಿಸಿ ಸಾರಾಂಶ ಬರೆಯಿರಿ. 1x4=4**

40. ಉರ್ವಿಯೊಳ್ ಕೌಸಲ್ಯೆಪಡೆದ ಕುವರಂರಾಮ

ನೋರ್ವನೇವೀರನಾತನ ಯಜ್ಞತುರಗಮಿದು

ನಿರ್ವಹಿಸ ಲಾರ್ಪರಾರಾದೊಡಂತಡೆಯಲೆಂದಿರ್ದ ಲೇಖನವ ನೋದಿ

ಗರ್ವ ಮಂಬಿಡಿಸದಿರ್ದೊಡೆ ತನ್ನ ಮಾತೆಯಂ

ಸರ್ವ ಜನ ಮುಂಬಂಜೆಯೆನ್ನದಿರ್ದಪುದೆತನ

ಗುರ್ವ ತೋಳ್ಗಳಿವೇತಕೆಂದು ಸಲೆವಾಸಿಯಂ ತೊಟ್ಟು ಲವನುರಿದೆದ್ದನು.

ಈ ಪದ್ಯಭಾಗವನ್ನು ಲಕ್ಷ್ಮೀಶ ಕವಿಯಜೈಮಿನಿ ಭಾರತ ಪದ್ಯಭಾಗದಿಂದ ಆರಿಸಿರುವ ವೀರಲವ ಎಂಬ ಪದ್ಯಪಾಠದಿಂದ ಆಯ್ಕೆ ಮಾಡಲಾಗಿದೆ.

ಶ್ರೀರಾಮನ ಅಶ್ವಮೇಧಯಾಗದ ಕುದುರೆಯು ದೇಶದೇಶಗಳನ್ನು ಸುತ್ತಾಡಿ ವಾಲ್ಮೀಕಿ ಆಶ್ರಮಕ್ಕೆ ಬರುತ್ತದೆ. ಆಗತನ್ನ ಒಡನಾಡಿಗಳ ಜೊತೆ ಗೂಡಿಬರುತ್ತಿದ್ದಲವನು ಕುದುರೆಯನ್ನು ಕಂಡು ಅದರ ಬಳಿಗೆ ಬಂದು, ಅದರನೆತ್ತಿಯ ಮೇಲಿದ್ದ ಪಟ್ಟದ ಲಿಖಿತವನ್ನು ಓದುತ್ತಾನೆ. ಇಡೀ ಭೂಮಂಡಲದಲ್ಲಿ

ಕೌಸಲ್ಯೆಯ ಮಗನಾದ ಶ್ರೀರಾಮನೊಬ್ಬನೇ ವೀರನು. ಇದು ಆತನ ಯಜ್ಞಕುದುರೆ. ಇದನ್ನು ನಿರ್ವಹಿಸುವವರು ಯಾರಾದರೂ ಇದ್ದರೆ ತಡೆಯಲಿ ಎಂದಿರ್ದ ಲೇಖನವನ್ನು ಓದಿ ಕೋಪಗೊಂಡು

ಶ್ರೀರಾಮನಗರ್ವವನ್ನು ಬಿಡಸದಿದ್ದರೆ ನನ್ನ ಮಾತೆಯನ್ನು ಸರ್ವಜನರು ಬಂಜೆಯೆನ್ನದಿರುವರೆ? ತನಗೆ ಇರುವ ಶಕ್ತಿ ಸಾಮರ್ಥ್ಯವಾದರೂ ಏತಕ್ಕೆ? ಎಂದು ಪ್ರತಿಜ್ಞೆಯನ್ನು ಕೈಗೊಂಡು ಲವನು ಉರಿದೆದ್ದನು.

ಲವಕುಶರು ಹುಟ್ಟಿದ್ದು ಋಷ್ಯಾಶ್ರಮದಲ್ಲಾದರೂ ಸಹಜ ಕ್ಷಾತ್ರಗುಣ, ವೀರತೆಯಿಂದ ಕುದುರೆಯನ್ನು ಕಟ್ಟಿ ಹಾಕುತ್ತಾರೆ. ಕಷ್ಟ–ಸವಾಲುಗಳು ಬಂದಾಗಚಿಕ್ಕವರು ಅಸಮರ್ಥರು ಎಂದು ಕೂರದೆದಿಟ್ಟತನದಿಂದ ಎದುರಿಸಬೇಕೆಂಬ ಬಾಲ್ಯ ಸಹಜ ಸಾಹಸ ಪ್ರವೃತ್ತಿ ಹಾಗೂ ಲವನಿಗೆ ತನ್ನ ತಾಯಿಯ ಮೇಲಿದ್ದ ಗೌರವ, ಅಭಿಮಾನ ಇತ್ಯಾದಿ ಅಂಶಗಳು ಈ ಪದ್ಯದಲ್ಲಿ ಅಡಕವಾಗಿರುವ ಉತ್ತಮ ಮೌಲ್ಯಗಳಾಗಿವೆ.

**XII. ಈ ಕೆಳಗಿನ ಪ್ರಶ್ನೆಗಳಲ್ಲಿ ಯಾವುದಾದರೂ ಎರಡು ಪ್ರಶ್ನೆಗಳಿಗೆ ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ 2x4=8**

**41. ಮುದುಕಿಯು ತನ್ನ ಮಗನು ಯುದ್ಧಕ್ಕೆ ಹೋದ ಸಂದರ್ಭವನ್ನು ಹೇಗೆ ವಿವರಿಸಿದಳು?**

**ಅಥವಾ**

**ರಾಹಿಲನು ಮುದುಕಿಯ ಕುಟುಂಬಕ್ಕೂ, ಮುದುಕಿಯು ರಾಹಿಲನಿಗೂ ಮಾಡಿದ ಸಹಾಯವನ್ನು ಸಂಕ್ಷಿಪ್ತವಾಗಿ ವಿವರಿಸಿ.**

ಉತ್ತರ : ರಾಹಿಲನು ಮುದುಕಿಯನ್ನು 'ಅಮ್ಮ ಈಗ ನಿಮ್ಮ ಮಗ ಎಲ್ಲಿದ್ದಾನೆ? ' ಎಂದು ಕೇಳಿದಾಗ ಮುದುಕಿಯು "ಯುದ್ಧಕ್ಕೆ ಹೋಗಿದ್ದಾನೆ! ನನ್ನ ಮಗನಿನ್ನೂ ಚಿಕ್ಕ ಹುಡುಗನಾಗಿದ್ದಾಗ ಯುದ್ಧಕ್ಕೆ ಹೋದ ಅವನ ತಂದೆ ಹಂತಿರುಗಲಿಲ್ಲ. ಎದೆತುಂಬ ಬೂದಿಮುಚ್ಚಿದ ಕೆಂಡ. ಎದೆಯಗಾಯ ಇಂದಿಗೂ ಇದೆ ನೋಡು. ಎಲ್ಲ ದು:ಖವನ್ನು ನುಂಗಿಕೊಂಡು ಮಗನನ್ನು ಸಾಕಿಸಲಹಿದೆ. ಮದುವೆಯನ್ನು ಮಾಡಿದೆ. ಈಗ ಐದಾರುವರ್ಷಗಳ ಬಳಿಕ ಸೊಸೆ ಗರ್ಭಿಣಿಯಾದಳು. ಮನೆಯಲ್ಲೊಂದು ಪುಟ್ಟ ಮಗು ವಿನ ಅಳು ಕೇಳಲುನನ್ನ ಮಗನು ತುದಿಗಾಲಲ್ಲಿ ನಿಂತು ಕಾಯುತ್ತಿದ್ದನು. ಅಷ್ಟರಲ್ಲಿ ಬಂತುಯುದ್ಧ ! ಅವನೊಮ್ಮೆ ಹಿಂತಿರುಗಿ ಬಂದಿದ್ದರೆ ಸಾಕಾಗಿತ್ತು. ಈ ವಿಷಯ ತಿಳಿದು ಅವನೆಷ್ಟು ಸಂಕಟಪಡುತ್ತಾನೋ ." ಕೊನೆಯ ಮಾತನ್ನು ಹೇಳುವಾಗ ಮುದುಕಿಯ ಕಂಠಗದ್ಗದವಾಗಿ ಮುಂದೆ ಮಾತೇ ಹೊರಡಲಿಲ್ಲ. ಹೀಗೆ ಮುದುಕಿಯು ತನ್ನ ಮಗನು ಯುದ್ಧಕ್ಕೆ ಹೋದ ಸಂದರ್ಭವನ್ನು ವಿವರಿಸಿದಳು.

ಅಥವಾ

ದೇಶದ ಗಡಿ ಭಾಗದಲ್ಲಿ ಸಮುದ್ರದ ಮೇಲಿನ ಆಕಾಶದಲ್ಲಿ ಹಾರುತ್ತಿದ್ದ ಯುದ್ಧ ವಿಮಾನವು ವೈರಿಗಳ ವೈಮಾನಿಕ ದಾಳಿಯಿಂದ ನುಚ್ಚು ನೂರಾಗಿ ಸಮುದ್ರದ ಮೇಲೆ ಬಿದ್ದಿತು. ಆಗ ಅದರಲ್ಲಿದ್ದ ಡಾಕ್ಟರ್ ರಾಹಿಲನುಕಾಲಿಗೆ ತೀವ್ರ ಪೆಟ್ಟಾಗಿದ್ದರೂ ಕಷ್ಟಪಟ್ಟು ನೀರಿನಲ್ಲಿ ಈಜಿ ದಡ ಸೇರಿ ಅಲ್ಲಿಯೇ ಇದ್ದ ಅನ್ಯ ದೇಶದವರ ಮನೆಗೆ ತೆವಳಿಕೊಂಡು ಬಂದು ಬಾಗಿಲು ತಟ್ಟುತ್ತಾನೆ. ಬಾಗಿಲು ತೆರೆದ ಮುದುಕಿಯ ಸೊಸೆಯು ಹೆರಿಗೆಯ ಬೇನೆಯಿಂದ ಬಳಲುತ್ತಿರುತ್ತಾಳೆ. ಆ ಸಮಯದಲ್ಲಿ ವೈದ್ಯನಾಗಿದ್ದ ರಾಹಿಲನು ಅಮ್ಮಾ, ನಾನೋರ್ವ ಡಾಕ್ಟರ್. ನಾನು ಆಕೆಯನ್ನು ಪರೀಕ್ಷಿಸಲೇ? ಎಂದಾಗ ಮುದುಕಿಯುನೀರಲ್ಲಿ ಒದ್ದೆಯಾಗಿದ್ದ ರಾಹಿಲನನ್ನು ನೋಡಿ ತನ್ನ ಮಗನ ಬಟ್ಟೆಯನ್ನು ತಂದು ಕೊಡುತ್ತಾಳೆ. ನಂತರ ರಾಹಿಲನು ಕುಳಿತಲ್ಲೇ ಬಟ್ಟೆ ಬದಲಾಯಿಸಿದನು. ತನ್ನ ಕಾಲಿನನೋವನ್ನು ಮರೆತು ಮುದುಕಿಯ ಸೊಸೆಯನ್ನು ಪರೀಕ್ಷೆ ಮಾಡಿ ಮಗುವನ್ನು ರಕ್ಷಿಸಲು ಸಾಧ್ಯವಾಗದಿದ್ದರೂ

ತಾಯಿಯನ್ನು ಉಳಿಸುವಲ್ಲಿ ಯಶಸ್ವಿಯಾಗುತ್ತಾನೆ. ಅದೇ ಸಮಯದಲ್ಲಿ ಅವನನ್ನು ಹುಡುಕಿಕೊಂಡು ನಾಲ್ಕೈದು ಜನಸೈನಿಕರು ಮುದುಕಿಯ ಮನೆಯಬಾಗಿಲನ್ನು ಬಡಿಯುತ್ತಾರೆ.ಆಗರಾಹಿಲನು ಬಾಗಿಲನ್ನು ತೆರೆಯಬೇಡಿ ಎಂದು ಕೈಸನ್ನೆ ಮಾಡಿದಾಗ, ತನ್ನ ಸೊಸೆಯು ಮಲಗಿದ್ದ ಕೋಣೆಯ ಮಂಚದಡಿಗೆ ಕಳುಹಿಸಿ ನಂತರ ಬಾಗಿಲು ತೆರೆಯುತ್ತಾಳೆ. ಒಳನುಗ್ಗಿದ ಸೈನಿಕರು ಮುದುಕಿಯನ್ನು ಕುರಿತು, "ಯಾರಾದರೂ ಗಾಯಗೊಂಡ ಶತ್ರು, ದೇಶದ ಸೈನಿಕರು ಈ ಕಡೆಬಂದಿದ್ದಾರೆಯೆ?" ಎಂದು ಕೇಳಿದಾಗ ಯಾರೂ ಬಂದಿಲ್ಲ ಎಂದು ಹೇಳಿ ತನ್ನ ದೇಶದ ಸೈನಿಕನಿಂದ ರಾಹಿಲನನ್ನು ರಕ್ಷಿಸುತ್ತಾಳೆ. ತದನಂತರ ಒಂದೆರಡು ದಿನಗಳಲ್ಲಿ ಪರಸ್ಪರರಲ್ಲಿ ವಿಶ್ವಾಸ ಮೂಡಿ ಸುಖದು:ಖಗಳನ್ನು ಹಂಚಿಕೊಂಡರು. ಹೀಗೆ ರಾಹಿಲನು ಮುದುಕಿಯ ಕುಟುಂಬಕ್ಕೂ, ಮುದುಕಿಯು ರಾಹಿಲನಿಗೂ ಪರಸ್ಪರ ಸಹಾಯ ಮಾಡಿದರು.

**42. ಭೀಷ್ಮ ದಯೋರ್ಧನರ ನಡುವಿನ ಸಂಭಾಷಣೆಯ ಸ್ವಾರಸ್ಯವನ್ನು ಬರೆಯಿರಿ.**

**ಅಥವಾ**

**ದುರ್ಯೋಧನನ ಛಲದ ಗುಣ ಅವನಮಾತುಗಳಲ್ಲಿ ವ್ಯಕ್ತವಾಗಿರುವ ಬಗೆಯನ್ನು ವಿವರಿಸಿ.**

**ಉತ್ತರ :** ದುರ್ಯೋಧನನು ತನ್ನ ತಂದೆ–ತಾಯಿಯರ ಅಪೇಕ್ಷೆಯಂತೆ ರಣರಂಗದಲ್ಲಿ ಶರಶಯ್ಯೆಯಲ್ಲಿ ಮಲಗಿದ್ದಭೀಷ್ಮರ ಬಳಿಗೆ ಬಂದಾಗ ಭೀಷ್ಮರುದರ್ಯೋಧನನಿಗೆ ಸಲಹೆಯನ್ನು ನೀಡುತ್ತಾ, ನೀನು ಒಪ್ಪಿಕೊಳ್ಳುವುದಾದರೆ ಪಾಂಡವರನ್ನು ಒಪ್ಪಿಸಿ ಅವರೊಂದಿಗೆ ಸಂಧಿಯನ್ನು ಮಾಡಿ ಮೊದಲಿನಂತೆಯೇ ಅವರುನಡೆ ಯುವ ಹಾಗೆ ಮಾಡುವೆನು. ಇನ್ನು ಅವರು ನಾವು ಹೇಳಿದ್ದನ್ನು ಒಪ್ಪಿಕೊಳ್ಳುತ್ತಾರೆ. ನನ್ನ ಮಾತನ್ನು ಮೀರುವವರಲ್ಲ. ನೀನು ಕೂಡ ನಾವು ಹೇಳಿದ್ದನ್ನು ಮೀರದೆನಡೆದು ಕೊಳ್ಳಬೇಕು ಎಂದಾಗ, ದುರ್ಯೋಧನನುಮುಗುಳ್ನಗೆ ನಕ್ಕು ಅಜ್ಜ, ನಿಮಗೆ ನಮಸ್ಕರಿಸಿ ನಿಮ್ಮಿಂದ ಆಶೀರ್ವಾದವನ್ನು ಪಡೆದುಕೊಂಡು ಹೋಗಲೆಂದು ಬಂದೆನೇ ಹೊರತು ಆ ಶತ್ರುಗಳಾದ ಪಾಂಡವರೊಡನೆ ಒಪ್ಪಂದವನ್ನು ಏರ್ಪಡಿಸಲೆಂದು ಬರಲಿಲ್ಲ. ನಾಳಿನ ಸಮರದಲ್ಲಿ ನನ್ನ ಕೆಲಸ ಏನು ಹೇಳಿ ಎನ್ನುತ್ತಾ 'ನಾನು ಪಾಂಡವರೊಂದಿಗೆ ನೆಲಕ್ಕಾಗಿ ಹೋರಾಡುತ್ತಿಲ್ಲ ಛಲಕ್ಕಾಗಿ ಹೋರಾಡುತ್ತಿರುವೆನು.' ಈ ಭೂಮಿ ನನಗೆ ಪಾಳು ಭೂಮಿ. ಕರ್ಣನನ್ನು ಕೊಲ್ಲಿಸಿದ ನೆಲದೊಡನೆ ನಾನು ಮತ್ತೆ ಬಾಳುವುದುಂಟೆ? ನನ್ನ ಪ್ರೀತಿಯ ಗೆಳೆಯ ಕರ್ಣ, ನನ್ನ ಪ್ರೀತಿಯ ತಮ್ಮದು ಶ್ಯಾಸನರನ್ನು ಕೊಂದ ಅರ್ಜುನ–ಭೀಮರು ಇರುವ ತನಕ, ನನ್ನ ದೇಹದಲ್ಲಿ ಪ್ರಾಣ ಇರುವವರೆಗೂ ಅಜ್ಜ ಸಂಧಿಯನ್ನು ಮಾಡಿಕೊಳ್ಳುವುದಿಲ್ಲ. ಮೊದಲು ಆ ಇಬ್ಬರನ್ನು ಕೊಂದು ನಂತರ ಧರ್ಮರಾಯನೊಡನೆ ಸಂಧಿ ಮಾಡಿಕೊಳ್ಳಲು ಆಗುವುದಿಲ್ಲ ಎಂದು ಹೇಳುವೆನೆ? ನನ್ನ ಒಡಹುಟ್ಟಿದ ನೂರುಮಂದಿ ಸಹೋದರರು ಯುದ್ಧದಲ್ಲಿ ಹೋರಾಡಿ ಸತ್ತರು, ಸತ್ತವರು ಮತ್ತೆ ಹುಟ್ಟುವುದಿಲ್ಲವೆ ನಾನು ಪಾಂಡವರೊಂದಿಗೆ ಹೋರಾಡಿ ಛಲವನ್ನೇ ಮೆರೆಯುವೆನು. ಅಜ್ಜ ನಾನು ಪಾಂಡವರೊಂದಿಗೆ ಯುದ್ಧ ಮಾಡದೇ ಇರುವುದಿಲ್ಲ. ನಾಳಿನ ಸಮರದಲ್ಲಿ ಈ ಭೂಮಿಗೆ ಪಾಂಡವರು ಒಡೆಯರಾಗಬೇಕು ಇಲ್ಲವೇ ನಾನು ಒಡೆಯನಾಗಬೇಕು. ಆದ್ದ–ರಿಂದ ನಾನು ಯುದ್ಧವನ್ನೇ ಮಾಡುವೆನು ಎಂದು ಹೇಳಿದನು.

ಅಥವಾ

ಛಲವನ್ನೇ ಮುಖ್ಯ ಗುಣವಾಗುಳ್ಳ ದುರ್ಯೋಧನ ಯುದ್ಧಮಾಡಿಯೇ ತೀರಬೇಕೆಂದು ನಿರ್ಧರಿಸಿದ್ದನು. ತಂದೆ–ತಾಯಿಯರ ಅಪೇಕ್ಷೆಯಂತೆ ಭೀಷ್ಮರ ಬಳಿಗೆ ಬಂದ ದುರ್ಯೋಧನನಿಗೆ ಸಂಧಿ ಮಾಡಿಕೊಳ್ಳುವಂತೆ ಭೀಷ್ಮರು ಸಲಹೆ ನೀಡುತ್ತಾರೆ. ತಾತ ಭೀಷ್ಮರ ಸಲಹೆಗೂ ಒಪ್ಪದ ದುರ್ಯೋಧನನ 'ಛಲದಗುಣ' ಅವನ ಸ್ವಭಾವಕ್ಕೆ ತಕ್ಕನಾಗಿ ವ್ಯಕ್ತಗೊಂಡಿದೆ. ಭೀಷ್ಮರ ಸಲಹೆಯನ್ನು ನಿರಾಕರಿಸಿ ಹೀಗೆ ಹೇಳುತ್ತಾನೆ. 'ಅಜ್ಜ, ನಿಮಗೆ ನಮಸ್ಕರಿಸಿ ನಿಮ್ಮಿಂದ ಆಶೀರ್ವಾದವನ್ನು ಪಡೆದುಕೊಂಡು ಹೋಗಲೆಂದು ಬಂದೆನೇ ಹೊರತು ಆ ಶತ್ರುಗಳಾದ ಪಾಂಡವರೊಡನೆ ಒಪ್ಪಂದವನ್ನು ಏರ್ಪಡಿಸಲೆಂದು ಬರಲಿಲ್ಲ. ನಾಳಿನ ಸಮರದಲ್ಲಿ ನನ್ನ ಕೆಲಸ ಏನು ಹೇಳಿ ಎನ್ನುತ್ತಾ' ನಾನು ಪಾಂಡವರೊಂದಿಗೆ ನೆಲಕ್ಕಾಗಿ ಹೋರಾಡುತ್ತಿಲ್ಲ ಛಲಕ್ಕಾಗಿ ಹೋರಾಡುತ್ತಿರುವೆನು. ಈ ಭೂಮಿ ನನಗೆ ಪಾಳುಭೂಮಿ. ಕರ್ಣನನ್ನು ಕೊಲ್ಲಿಸಿದ ನೆಲದೊಡನೆ ನಾನು ಮತ್ತೆ ಬಾಳುವುದುಂಟೆ? ನನ್ನ ಪ್ರೀತಿಯ ಗೆಳೆಯ ಕರ್ಣ, ನನ್ನಪ್ರೀತಿಯ ತದುಶ್ಯಾಸನರನ್ನು ಕೊಂದ ಅರ್ಜುನ–ಭೀಮರು ಇರುವ ತನಕ, ನನ್ನ ದೇಹದಲ್ಲಿ ಪ್ರಾಣ ಇರುವವರೆಗೂ ಅಜ್ಜ ಸಂಧಿಯನ್ನು ಮಾಡಿಕೊಳ್ಳುವುದಿಲ್ಲ. ಮೊದಲು ಆ ಇಬ್ಬರನ್ನುಕೊಂದು ನಂತರ ಧರ್ಮರಾಯನೊಡನೆ ಸಂಧಿಗೆ ಒಪ್ಪುತ್ತೇನೆ. ಯುದ್ಧದ ಪರಿಣಾಮ ಸರ್ವನಾಶ ಎಂದು ತಿಳಿದಿದ್ದರೂ ಪಾಂಡವರೊಂದಿಗೆ ಹೋರಾಡಿ ಛಲವನ್ನೇ ಮೆರೆಯುವೆನು ನಾಳಿನ ಸಮರದಲ್ಲಿ ಈ ಭೂಮಿಗೆ ಪಾಂಡವರು ಒಡೆಯರಾಗಬೇಕು ಇಲ್ಲವೇ ನಾನು ಒಡೆಯನಾಗಬೇಕು. ಆದ್ದ–ರಿಂದ ನಾನು ಯುದ್ಧವನ್ನೇ ಮಾಡುವೆನು ಎಂದು ಹೇಳುವ ದುರ್ಯೋಧನನ ಗುಣ ಅವನ ಮಾತುಗಳಲ್ಲಿ ವ್ಯಕ್ತವಾಗಿದೆ.

**XIII. ಗದ್ಯ ಭಾಗವನ್ನು ಓದಿಕೊಂಡು, ಪ್ರಶ್ನೆಗಳಿಗೆ ಉತ್ತರಿಸುವುದು: (ಅಂಶಗಳನ್ನಾಧರಿಸಿ ಪ್ರತಿ ಸರಿಯುತ್ತರಕ್ಕೆ 2 ಅಂಕಗಳು) 2x2=4**

43. ಸ್ವಾತಂತ್ರ್ಯಾ ನಂತರ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರವಾಗಿ ಭಾರತ ಕೂಡ ಸಹಿ ಹಾಕಿದ್ದರ ಪರಿಣಾಮ ಹಲವಾರು ಶಾಂತಿಪಾಲನಾ ಕಾರ್ಯಾಚರಣೆಗಳಲ್ಲಿ ಭಾಗವಹಿಸಬೇಕಾಗಿ ಬಂತು. ಕೊ–ರಿಯಾ, ಸೈಪ್ರಸ್, ಕಾಂಗೋ, ಜೈರ್, ಉಂಗಾಂಡ–––ಹೀಗೆ ಹಲವು ರಾಷ್ಟ್ರಗಳಲ್ಲಿ ಭಾರತೀಯ ಸೈನಿಕರು ವಿಶ್ವಸಂಸ್ಥೆಯ ಭಾಗವಾಗಿ ಕೆಲಸ ಮಾಡಿದರು. 1961ರ ಡಿಸೆಂಬರ್ ಕಾಂಗೋ ಕಾರ್ಯಾಚರಣೆಯಲ್ಲಿ ಗೂರ್ಖಾ ರೈಫಲ್ಸ್‌ನ ಕ್ಯಾಪ್ಟನ್ ಗುರುಬಚ್ಚನ್ ಸಿಂಗ್ ಸಲಾರಿಯಾಕಟಾಂಗದ ಎಲಿಜಬೆತ್ ವಿಲ್ಲೆಯಲ್ಲಿ ಕೇವಲ ಬಯೋನೆಟ್, ಕುಕ್ರಿ ಮತ್ತು ಗ್ರೆನೆಡ್ ಗಳನ್ನು ಬಳಸಿ ವೈರಿ ಸೈನಿಕರನ್ನು ಹಾಗೂ ಅವರ ಎರಡು ವಾಹನಗಳನ್ನು ನಾಶ ಮಾಡಿ ವಿಶ್ವಸಂಸ್ಥೆಯ ಕಛೇರಿಗೆ ಬಂದಿದ್ದ ಅಪಾಯವನ್ನು ತಮ್ಮ ಪ್ರಾಣಾರ್ಪಣೆ ಮಾಡಿತಡೆದರು. ಈ ಮೂಲಕ ಭಾರತೀಯ ಯೋಧರಕರ್ತವ್ಯಯ ನಿಷ್ಠೆಯನ್ನು ಜಗತ್ತಿಗೆ ಸಾರಿ, ವಿದೇಶಿ ನೆಲದಲ್ಲಿ ಮರಣೋತ್ತರ ಪರಮ ವೀರ ಚಕ್ರಪ್ರಶಸ್ತಿ ಗಳಿಸಿದ ಮೊದಲಿಗರಾದರು.

ಸ್ವಾತಂತ್ರ್ಯಾ ನಂತರ ಭಾರತ 1965,1971 ರಲ್ಲಿ ಪಾಕಿಸ್ಥಾನದೊಡನೆ ಮತ್ತು 1962 ರಲ್ಲಿ . ಚೀನಾದೊಡನೆ ಮೂರು ಯುದ್ಧಗಳಲ್ಲಿ ಭಾಗವಹಿಸಿತ್ತು. ಅಲ್ಲದೆ ಸಿಯಾಚಿನ್ ಪ್ರದೇಶದ ವಶಕ್ಕಾಗಿ ಆಪರೇಷನ್ ಮೇಘನಾದ್ (1988), ಕಾರ್ಗಿಲ್ ಕಾರ್ಯಾಚರಣೆಗೆ ಆಪರೇಷನ್ ವಿಜಯ (1999) ಇತ್ಯಾದಿ ಗಡಿತಂಟೆ ಹೋರಾಟಗಳನ್ನು ಎದುರಿಸಿತ್ತು.

**ಪ್ರಶ್ನೆಗಳು:**

**ಅ) ವಿಶ್ವ ಸಂಸ್ಥೆಯ ಕಛೇರಿಗೆ ಬಂದಿದ್ದ ಅಪಾಯವನ್ನು ಕ್ಯಾಪ್ಟನ್ ಗುರುಬಚ್ಚನ್ ಸಿಂಗ್ ಹೇಗೆ ತಡೆದರು?**

1961 ರ ಡಿಸೆಂಬರ್ ಕಾಂಗೋ ಕಾರ್ಯಾಚರಣೆಯಲ್ಲಿ ಗೂರ್ಖಾರೈಫಲ್ಸ್ ನ ಕ್ಯಾಪ್ಟನ್ ಗುರುಬಚ್ಚನ್ ಸಿಂಗ್ ಸಲಾರಿಯಾ ಕಟಾಂಗದ ಎಲಿಜಬೆತ್ ವಿಲ್ಲೆಯಲ್ಲಿ ಕೇವಲ ಬಯೋನೆಟ್, ಕುಕ್ರಿ ಮತ್ತು ಗ್ರೆನೆಡ್‌ಗಳನ್ನು ಬಳಸಿ ವೈರಿಸೈನಿಕರನ್ನು ಹಾಗೂಅವರ ಎರಡು ವಾಹನಗಳನ್ನು ನಾಶ ಮಾಡಿ ವಿಶ್ವಸಂಸ್ಥೆಯ ಕಛೇರಿಗೆ ಬಂದಿದ್ದ ಅಪಾಯವನ್ನು ತಮ್ಮ ಪ್ರಾಣಾರ್ಪಣೆ ಮಾಡಿ ತಡೆದರು. ಈ ಮೂಲಕ ಭಾರತೀಯ ಯೋಧರಕರ್ತವ್ಯಯನಿಷ್ಠೆಯನ್ನು ಜಗತ್ತಿಗೆ ಸಾರಿ, ವಿದೇಶಿ ನೆಲದಲ್ಲಿ ಮರಣೋತ್ತರಪರಮ ವೀರ ಚಕ್ರಪ್ರಶಸ್ತಿಗಳಿಸಿದ ಮೊದಲಿಗರಾದರು.

**ಆ) ಸ್ವಾತಂತ್ರ್ಯಾ ನಂತರ ಭಾರತೀಯ ಸೇನೆ ಸಾಧಿಸಿದ ವಿಜಯಗಳನ್ನು ಪಟ್ಟಿ ಮಾಡಿ ಬರೆಯಿರಿ**

ಸ್ವಾತಂತ್ರ್ಯಾ ನಂತರ ಭಾರತ 1965, 1971 ರಲ್ಲಿ ಪಾಕೀಸ್ಥಾನ ದೊಡನೆ ಮತ್ತು 1962 ರಲ್ಲಿ . ಚೀನಾದೊಡನೆ ಮೂರು ಯುದ್ಧಗಳಲ್ಲಿ ಭಾಗವಹಿಸಿತ್ತು. ಅಲ್ಲದೆ ಸಿಯಾಚಿನ್ ಪ್ರದೇಶದ ವಶಕ್ಕಾಗಿ ಆಪರೇಷನ್ ಮೇಘನಾದ್ (1988), ಕಾರ್ಗಿಲ್ ಕಾರ್ಯಾಚರಣೆಗೆ ಆಪರೇಷನ್ ವಿಜಯ (1999) ಇತ್ಯಾದಿ ಗಡಿ ತಂಟೆ ಹೋರಾಟಗಳನ್ನು ಎದುರಿಸಿತ್ತು. ಇವು ಸ್ವಾತಂತ್ರ್ಯಾ ನಂತರ ಭಾರತೀಯ ಸೇನೆಸಾಧಿಸಿದ ವಿಜಯಗಳಾಗಿವೆ.

**XIV. ಕೆಳಗಿನ ಯಾವುದಾದರೂ ಒಂದಕ್ಕೆ ಕೊಟ್ಟಿರುವ ಮಾಹಿತಿಯನ್ನು ಆಧರಿಸಿ ಪತ್ರ ಬರೆಯಿರಿ 1x5=5**

**44. ನಿಮ್ಮನ್ನು ಕೊಡಗಿನ ಸರ್ಕಾರಿ ಪ್ರೌಢಶಾಲೆಯ 'ಅಂಜಲಿ' ಎಂದು ಭಾವಿಸಿಕೊಂಡು, ವರ್ಗಾವಣೆ ಪತ್ರ ಹಾಗೂ ಅಂಕಪಟ್ಟಿಯನ್ನು ನೀಡುವಂತೆ ಕೋರಿ, ನಿಮ್ಮ ಶಾಲೆಯ ಮುಖ್ಯೋಪಾಧ್ಯಾಯರಿಗೆ ಮನವಿ ಪತ್ರವನ್ನು ಬರೆಯಿರಿ.**

ಅಥವಾ

ನಿಮ್ಮನ್ನು ಉದುಪಿಯ ಸರ್ಕಾರಿ ಪ್ರೌಢ ಶಾಲೆಯ್ರ ಮೇಶ್ ಎಂದು ಭಾವಿಸಿಕೊಂಡು, ಶಾಲಾ ಶೈಕ್ಷಣಿಕ ಪ್ರವಾಸಕ್ಕೆ ಹೋಗಲು ಅನುಮತಿ ಹಾಗೂ 3,000 ರೂ.ಗಳನ್ನು ಕಳುಹಿಸಿಕೊಡುವಂತೆ ಕೋರಿ, ಶಿವಮೊಗ್ಗದ ಕುವೆಂಪು ನಗರದಲ್ಲಿ ವಾಸವಾಗಿರುವ 'ಬಸವರಾಜಪ್ಪ' ಎಂಬ ಹೆಸರಿನ ನಿಮ್ಮ ತಂದೆಯವರಿಗೆ ಪತ್ರವನ್ನು ಬರೆಯಿರಿ.

(ಪತ್ರ ಲೇಖನವನ್ನು ವಿಷಯ ಶಿಕ್ಷಕರ ಸಹಾಯದಿಂದ ಅಭ್ಯಾಸ ಮಾಡುವುದು)

**XV. ಕೆಳಗಿನ ಯಾವುದಾದರೂ ಒಂದು ವಿಷಯದ ಬಗ್ಗೆ ಹದಿನೈದು ವಾಕ್ಯಗಳಿಗೆ ಮೀರದಂತೆ ಪ್ರಬಂಧ ಬರೆಯಿರಿ 1x5=5**

**45. ರಾಷ್ಟ್ರೀಯ ಹಬ್ಬಗಳ ಮಹತ್ವ**

ಅಥವಾ

ಅಕ್ಷರ ದಾಸೋಹ ಮತ್ತು ಕ್ಷೀರ ಭಾಗ್ಯಗಳ ಸಾಮಾಜಿಕ ಮಹತ್ವ

(ವಿಷಯ ಶಿಕ್ಷಕರ ಸಹಾಯದಿಂದ ಪ್ರಬಂಧ ಬರವಣಿಗೆ ಅಭ್ಯಾಸ ಮಾಡುವುದು)

# ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಹೊಸಕೋಟೆ ತಾಲ್ಲೂಕು. ಬೆಂಗಳೂರು ಗ್ರಾಮಾಂತರ ಜಿಲ್ಲೆ

ಪ್ರಶ್ನೋತ್ತರ ಪತ್ರಿಕೆ ಸಂಗ್ರಹ – 05

## ಪ್ರಥಮ ಭಾಷೆ– ಕನ್ನಡ

ಸಮಯ : 3 ಗಂಟೆ 15 ನಿಮಿಷ

10ನೇ ತರಗತಿ

ಒಟ್ಟು ಅಂಕಗಳು : 100

**I. ಈ ಕೆಳಗಿನ ಪ್ರಶ್ನೆಗಳಿಗೆ ಅಥವಾ ಅಪೂರ್ಣ ಹೇಳಿಕೆಗಳಿಗೆ ನಾಲ್ಕು ಆಯ್ಕೆಗಳನ್ನು ನೀಡಲಾಗಿದೆ. ಅವುಗಳಲ್ಲಿ ಸೂಕ್ತವಾದ ಉತ್ತರವನ್ನು ಆರಿಸಿ ಕ್ರಮಾಕ್ಷರದೊಂದಿಗೆ ಬರೆಯಿರಿ.**

**1. ದಿಗಂತಪದವು ಈ ಸಂಧಿಗೆ ಉದಾಹರಣೆಯಾಗಿದೆ.**

(ಎ) ಗುಣಸಂಧಿ (ಬಿ) ಜಶ್ತ್ವಸಂಧಿ

(ಸಿ) ವೃದ್ಧಿಸಂಧಿ (ಡಿ)ಶ್ಚುತ್ವಸಂಧಿ

**ಉತ್ತರ:** (ಬಿ) ಜಶ್ತ್ವಸಂಧಿ

**2. ಒಂದು ಪದವನ್ನೋ ವಾಕ್ಯವನ್ನೋ ಹೇಳಿ ಅದಕ್ಕೆ ಸಮನಾರ್ಥಕ ಪದವನ್ನೋ ವಾಕ್ಯವನ್ನೋ ಹೇಳುವಾಗ ಬಳಸುವ ಚಿಹ್ನೆ**

(ಎ) ಉದ್ಧರಣಚಿಹ್ನೆ (ಬಿ) ವಾಕ್ಯವೇಷ್ಠನಚಿಹ್ನೆ

(ಸಿ) ಆವರಣಚಿಹ್ನೆ (ಡಿ) ವಿವರಣಾತ್ಮಕಚಿಹ್ನೆ

**ಉತ್ತರ :** (ಸಿ) ಆವರಣಚಿಹ್ನೆ

**3. "ಬೆಟ್ಟದಾವರೆ" ಪದವು ಈ ಸಮಾಸಕ್ಕೆ ಉದಾಹರಣೆಯಾಗಿದೆ**

(ಎ) ತತ್ಪುರಷಸಮಾಸ (ಬಿ) ಕ್ರಿಯಾಸಮಾಸ

(ಸಿ)ಅಂಶಿಸಮಾಸ (ಡಿ) ದ್ವಿಗುಸಮಾಸ

**ಉತ್ತರ:** (ಎ) ತತ್ಪುರುಷಸಮಾಸ

**4. ಮಾಡು ಧಾತುವಿನ ವಿಧ್ಯರ್ಥಕ ರೂಪ**

(ಎ) ಮಾಡೇವು (ಬಿ) ಮಾಡಿಯಾರು

(ಸಿ ) ಮಾಡರು (ಡಿ)ಮಾಡಲಿ

**ಉತ್ತರ:** (ಡಿ) ಮಾಡಲಿ

**5. "ಸಾವಿತ್ರಿಗೆ" ಈ ಪದದಲ್ಲಿರುವ ವಿಭಕ್ತಿಯ ಹೆಸರು**

(ಎ) ದ್ವಿತೀಯಾ (ಬಿ) ತೃತೀಯಾ

(ಸಿ ) ಪಂಚಮೀ (ಡಿ) ಚತುರ್ಥಿ

**ಉತ್ತರ:** (ಡಿ) ) ಚತುರ್ಥಿ

**6. "ಧಗಧಗ" ಪದವು ಈ ಅವ್ಯಯಕ್ಕೆ ಸೇರಿದೆ.**

(ಎ) ಸಾಮಾನ್ಯಾರ್ಥಕಾವ್ಯಯ (ಬಿ) ಅನುಕರಣಾವ್ಯಯ

(ಸಿ ) ಭಾವಸೂಚಕಾವ್ಯಯ (ಡಿ) ಕ್ರಿಯಾರ್ಥಕಾವ್ಯಯ

**ಉತ್ತರ:** (ಬಿ) ಅನುಕರಣಾವ್ಯಯ

**II. ಸಂಬಂಧೀ ಪದ ಬರೆಯುವುದು (ಪ್ರತಿ ಸರಿ ಉತ್ತರಕ್ಕೆ ಒಂದು–ಅಂಕ) 4x1=4**

**7. ವರ್ಗೀಯ ವ್ಯಂಜನಾ ಕ್ಷರಗಳು :25 :: ಅವರ್ಗೀಯ ವ್ಯಂಜನಾ ಕ್ಷರಗಳು : –––––––––––**

(ಉತ್ತರ : 09 )

**8. ಹಾಲ್ಜೇನು : ಜೋಡುನುಡಿ : : ಬೇಡಬೇಡ :–––––(ದ್ವಿರುಕ್ತಿ)**

**9. ಪರ್ವತ : ರೂಢನಾಮ :: ಧರ್ಮರಾಯ :____ (ಅಂಕಿತನಾಮ)**

**10. ಮ್ಯಾಗ : ಮೇಲೆ :: ಸಕ್ಕಾರಿ : ––––––––– ( ಸಕ್ಕರೆ )**

**III. ಈ ಕೆಳಗಿನ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿ 7x1=7**

**11. ಮತಂಗಾಶ್ರಮದಲ್ಲಿ ವಾಸವಿದ್ದ ತಪಸ್ವಿನಿ ಯಾರು?**

ಮತಂಗಾಶ್ರಮದಲ್ಲಿ ವಾಸವಿದ್ದ ತಪಸ್ವಿನಿ ಶಬರಿ

**12. ಹಿತ ವಚನವು ಮನಸ್ಸಿನ ಕೊಳೆಯನ್ನು ಹೇಗೆ ತೊಳೆಯುತ್ತದೆ?**

ಮುಸ್ಸಂಜೆಯ ಚಂದ್ರ ಕತ್ತಲನ್ನು ಕಳೆಯುವಂತೆ, ಹಿತ ವಚನವು ಮನಸ್ಸಿನ ಕೊಳೆಯನ್ನು ತೊಳೆಯುತ್ತದೆ

**13. ಗಡಿ ಪ್ರದೇಶಲ್ಲಿ ಬ್ಲಾಕ್ ಔಟ್ ನಿಯಮವನ್ನು ಏಕೆ ಪಾಲಿಸಲಾಗುತ್ತದೆ?**

ಯುದ್ಧ ಕಾಲದಲ್ಲಿ ರಾತ್ರಿ ವೇಳೆ ಶತ್ರು ಸೈನಿಕರು ವೈಮಾನಿಕ ದಾಳಿ ಮಾಡಲು ಅವಕಾಶವಾಗದಂತೆ ವಿದ್ಯುತ್ ದೀಪ, ಬೆಂಕಿಯನ್ನು ಉರಿಸದೆ ಕತ್ತಲಿನಲ್ಲಿದ್ದು ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಗಡಿ ಪ್ರದೇಶಲ್ಲಿ ಬ್ಲಾಕ್ ಔಟ್ ನಿಯಮವನ್ನು ಪಾಲಿಸಲಾಗುತ್ತದೆ.

**14. ಧರ್ಮಬುದ್ಧಿಯು ತನ್ನ ಬೆಳಗಿನ ಹೊತ್ತನ್ನು ಹೇಗೆ ಕಳೆದನು?**

ಧರ್ಮಬುದ್ಧಿಯು ತನ್ನ ಬೆಳಗಿನ ಹೊತ್ತನ್ನು ದೇವಗುರು, ದ್ವಿಜರ ಪೂಜೆಯನ್ನು ಮಾಡುತ್ತ ಕಳೆದನು

**15. ಹಕ್ಕಿಯ ಕಣ್ಣುಗಳು ಯಾವುವು?**

ಹಕ್ಕಿಯ ಕಣ್ಣುಗಳು ಸೂರ್ಯ–ಚಂದ್ರರು

**16. ಯಜ್ಞಾಶ್ವವನ್ನು ಕಟ್ಟಿದವರು ಯಾರು?**

ಯಜ್ಞಾಶ್ವವನ್ನು ಕಟ್ಟಿದವರು ಲವ

**17. ಗೋವಿಂದ ಪೈಗಳು ಬರೆದ ಮೊದಲ ಯಕ್ಷಗಾನ ಪ್ರಸಂಗದ ಹೆಸರೇನು?**

ಗೋವಿಂದ ಪೈಗಳು ಬರೆದ ಮೊದಲ ಯಕ್ಷಗಾನ ಪ್ರಸಂಗದ ಹೆಸರು ಮಕರಾಕ್ಷನ ಕಾಳಗ

**IV. ಕೆಳಗಿನ ಪ್ರಶ್ನೆಗಳಿಗೆ ಮೂರು ಅಥವಾ ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ. 10x2=20**

**18. ಗುರೂ ಪದೇ ಶದಗುಣಗಳನ್ನು ಪಟ್ಟಿ ಮಾಡಿ**

ಗುರೂ ಪದೇಶ ಎಂದರೆ ಜನರ ಒಳಹೊರಗಣ ಕೊಳೆಗಳನ್ನು

ತೊಳೆದು ಬಿಡುವ ನೀರಿಲ್ಲದ 'ಮೀಹ' ತಲೆನೆರೆಯದೆ, ಮೈಸುಕ್ಕು ಗಟ್ಟದೆ ಮೂಡುವ ಮುಪ್ಪು; ಬೊಜ್ಜು ಬೆಳೆಯದೆ ಬರುವ ಗುರುತ್ವ; ಬಂಗಾರವಿಲ್ಲದೆ ಮಾಡಿದ ಬೆಲೆ ಬಾಳುವ ಕಿವಿಯೋಲೆ ; ಪಂಜು ಇಲ್ಲದೆ ಬೆಳಗುವ ಬೆಳಕು ; ಉದ್ವೇಗ ಬರಿಸದ ಜಾಗರಣೆ. ಇವುಗಳು ಗುರೂಪದೇಶದ ಗುಣಗಳಾಗಿವೆ.

**19. ಡಾಕ್ಟರ್ ವಿಮಾನದ ಪೈಲೆಟ್ಗೆ ಏನು ಹೇಳಿದನು?**

"ಇದು ನಮ್ಮ ಪ್ರದೇಶವೇ, ವೈರಿಗಳ ಪ್ರದೇಶವೇ ಎಂದು ಕೂಡ ಗೊತ್ತಾಗ್ತಾ ಇಲ್ಲ. ಹೇಗಾದರೂ ನೆಲ ಮುಟ್ಟಿದರೆ ಸಾಕಾಗಿತ್ತು" ಎಂದು ಡಾಕ್ಟರ್ ವಿಮಾನದ ಪೈಲೆಟ್ಗೆ ಹೇಳಿದನು

**20. ಅರಸ ವೃಷಭಾಂಕನು ಆಶ್ಚರ್ಯಗೊಳ್ಳಲು ಕಾರಣವೇನು?**

ಒಂದು ದಿನ ರತ್ನ ದ್ವೀಪದಿಂದ ಬಂದ ವ್ಯಾಪಾರಿ ಸರ್ವ ರತ್ನ ಕಂಬಳಿಗಳನ್ನು ಲಕ್ಷದೀನಾರುಗಳ ಬೆಲೆಯನ್ನು ಹೇಳಿದಾಗ ಅರಸನು ಕೊಳ್ಳಲಾರದೆ ಹೋಗೆಂದು ಹೇಳಿದಾಗ, ವ್ಯಾಪಾರಿಯು ಊರೆಲ್ಲಸುತ್ತಿ ಯಾರೂ ಕೊಳ್ಳದಿರಲು ಯಶೋಭದ್ರೆಯು ಅವುಗಳನ್ನು ಕೊಂಡು ಒಂದರಲ್ಲಿ ನಾಲ್ಕು ತುಂಡುಗಳಾಗಿ ಮಾಡಿ, ಅವುಗಳನ್ನು ಮತ್ತೆ 32 ತುಂಡುಗಳಾಗಿ ಮಾಡಿ ತನ್ನ ಸೊಸೆಯರಿಗೆ ಕೊಟ್ಟಳು ಅವರು ಅವುಗಳನ್ನು ತಮ್ಮ ಚಪ್ಪಲಿಗಳಲ್ಲಿ ಧರಿಸಿದರು. ಎಂಬ ಮಾತನ್ನು ಕೇಳಿ ಅರಸ ವೃಷಭಾಂಕನು ಆಶ್ಚರ್ಯಗೊಂಡನು

**21. ವೃಷಭಾಂಕನು ಸುಕುಮಾರಸ್ವಾಮಿಗೆ ವ್ಯಾಧಿಯಿದೆ ಎಂದು ಕೊಳ್ಳಲು ಕಾರಣವೇನು?**

ಅರಸ ವೃಷಭಾಂಕನು ಅರಮನೆಗೆ ಬಂದಾಗ ಅವರನ್ನು ಆಶೀರ್ವದಿಸಲು ಹಾಕಿದ ಬಿಳಿಸಾಸಿವೆ ಕಾಳುಗಳು ಒತ್ತಲು ಸುಕುಮಾರಸ್ವಾಮಿಯು ಸೊಂಟವನ್ನು ಅಲುಗಾಡಿಸುತ್ತಿದ್ದನು. ದೀಪದ ಬೆಳಕನ್ನು ಸೈರಿಸಲಾರದೆ ಕಣ್ಣುಗಳಿಂದ ನೀರು ಸು-ರಿಯುತ್ತಿತ್ತು. ಅನ್ನವನ್ನುತಿನ್ನುವಾಗ ಒಂದು ಅಗಳನ್ನು ತಿನ್ನುವುದು ಒಂದು ಅಗಳನ್ನು ಉಗಿಯುವುದು ಮಾಡುತ್ತಿದ್ದನು. ಇದೆಲ್ಲವನ್ನು ನೋಡಿ ಸುಕುಮಾರಸ್ವಾಮಿಗೆ ವ್ಯಾಧಿಯಿದೆ ಎಂದು ವೃಷಭಾಂಕನು ತಿಳಿದುಕೊಂಡನು.

**22. ತಾನು ಹೋರಾಡುತ್ತಿರುವುದು ನೆಲಕ್ಕಲ್ಲ ಛಲಕ್ಕೆ ಎಂಬುದನ್ನು ದುರ್ಯೋಧನ ಹೇಗೆ ವಿವರಿಸಿದ್ದಾನೆ?**

ದುರ್ಯೋಧನನು ಭೀಷ್ಮರ ಸಲಹೆಯನ್ನು ಪಡೆಯಲು ಬಂದಾಗ ಭೀಷ್ಮರು ಪಾಂಡವರೊಂದಿಗೆ ಸಂಧಿಯನ್ನು ಮಾಡಿಕೊಳ್ಳಲು ಹೇಳಿದಾಗ ದುರ್ಯೋಧನನು ನಾನು ನಿಮಗೆ ನಮಸ್ಕರಿಸಿ, ಆಶೀರ್ವಾದ ಪಡೆಯಲು ಬಂದಿದ್ದೇನೆಯೇ ಹೊರತು ಸಂಧಿ ಮಾಡಿಸಿ ಎಂದು ಕೇಳಲು ಬಂದಿಲ್ಲ ಎನ್ನುತ್ತ "ನಾನು ನೆಲಕ್ಕಾಗಿ ಹೋರಾಡುತ್ತಿಲ್ಲ ಛಲಕ್ಕಾಗಿ ಹೋರಾಡುತ್ತಿರುವೆನು.' ಈ ಭೂಮಿ ನನಗೆ ಪಾಳು ಭೂಮಿ. ಕರ್ಣನನ್ನು ಕೊಲ್ಲಿಸಿದ ನೆಲದೊಡನೆ ನಾನು ಮತ್ತೆ ಬಾಳುವುದಿಲ್ಲ." ಎಂದು ಹೇಳುವುದರ ಮೂಲಕ ತಾನು ನೆಲಕ್ಕಾಗಿ ಹೋರಾಡುತ್ತಿಲ್ಲ ಛಲಕ್ಕಾಗಿ ಹೋರಾಡುತ್ತಿರುವೆನು ಎಂದು ವಿವರಿಸಿದ್ದಾನೆ.

**23. ಪಾರ್ಥ ಭೀಮರ ಬಗಗೆದು ಯೋ಼ಧನನ ಅಭಿಪ್ರಾಯವೇನು?**

ನನ್ನ ಪ್ರೀತಿಯ ಗೆಳೆಯ ಕರ್ಣ, ನನ್ನ ಪ್ರೀತಿಯ ತಮ್ಮದು ಶ್ಯಾಸನರನ್ನು ಕೊಂದ ಅರ್ಜುನ-ಭೀಮರು ಇರುವ ತನಕ, ನನ್ನ ದೇಹದಲ್ಲಿ ಪ್ರಾಣ ಇರುವವರೆಗೂ ಅಜ್ಜ ಸಂಧಿಯನ್ನು ಮಾಡಿಕೊಳ್ಳುವುದಿಲ್ಲ. ಮೊದಲು ಆ ಇಬ್ಬರನ್ನು ಕೊಂದು ನಂತರ ಧರ್ಮರಾಯನೊಡನೆ ಸಂಧಿ ಮಾಡಿಕೊಳ್ಳುತ್ತೇನೆ. ಎಂದು ಪಾರ್ಥಭೀಮರ ಬಗಗೆದು ಯೋ಼ಧನನ ತನ್ನ ಅಭಿಪ್ರಾಯವನ್ನು ತಿಳಿಸುತ್ತಾನೆ.

**24. ಬಾಳಿನಲ್ಲಿ ತೃಪ್ತಿದೊರಕ ಬೇಕಾದರೆ ಏನು ಮಾಡಬೇಕೆಂದು ವಿವೇಕಾನಂದರ ಅಭಿಪ್ರಾಯವಾಗಿದೆ ?**

ದೇಶದ ಮತ್ತು ಇಡಿಯ ಜಗತ್ತಿನ ಕಲ್ಯಾಣ ನಿಮ್ಮ ಮೇಲೆ ನಿಂತಿದೆ ಎಂದು ಭಾವಿಸಿ ಕಾರ್ಯೋನ್ಮುಖರಾಗಬೇಕು. ವೇದಾಂತದ ಸಂದೇಶವನ್ನು ಪ್ರತಿಮನೆಗೂ ಸಾರಿ, ಪ್ರತಿಯೊಂದು ಆತ್ಮದಲ್ಲಿರುವ ಸುಪ್ತಪಾವಿತ್ರ್ಯವನ್ನು ಜಾಗೃತಗೊಳಿಸಬೇಕು. ಅನಂತರ ನೀವು ಎಷ್ಟೇ ಅಲ್ಪವನ್ನು ಸಾಧಿಸಿದ್ದರೂ ನೀವು ಒಂದು ಮಹಾ ಆದರ್ಶಕ್ಕಾಗಿ ಬಾಳಿ ದುಡಿದಿರಿ ಎಂಬ ತೃಪ್ತಿದೊರಕುತ್ತದೆ. ಎಂಬುದು ವಿವೇಕಾನಂದರ ಅಭಿಪ್ರಾಯವಾಗಿದೆ.

**25. ಭಗತ್ ಸಿಂಗ್ ಹೇಗೆ ಅಮರನಾದನು?**

ಜಲಿಯನ್ ವಾಲಾಬಾಗಿ ನರಕ್ತಸಿಕ್ತವಾಗಿದ್ದ ಮಣ್ಣನ್ನು ನಿಧಿಯಂತೆ ಕಾಪಾಡಿಕೊಂಡು ಬಂದಿದ್ದ ಬಾಲಕ ಭಗತ್ ಸಿಂಗ್ ತನ್ನ ಕ್ರಾಂತಿಕಾರಿ ಗುಂಪಿನ ಸಹಾಯದಿಂದ ಬ್ರಿಟಿಷ್ ಸರ್ಕಾರದ ವಿರುದ್ಧ ಸೇಡನ್ನು ತೀರಿಸಿಕೊಳ್ಳುತ್ತಾನೆ. ಇದರ ಫಲವಾಗಿ ಮರಣ ದಂಡನೆಗೆ ಈಡಾಗಿ ಅಮರನಾದನು.

**26. 'ವಸಂತ ಮುಖ ತೋರಲಿಲ್ಲ' ಕವನದಲ್ಲಿ ಪ್ರಕೃತಿಯ ಸಂಭ್ರಮ ಹೇಗೆ ವ್ಯಕ್ತವಾಗಿದೆ.**

ಪ್ರಶ್ನೆ ಪತ್ರಿಕೆ 03 ರಲ್ಲಿ ಉತ್ತರ ಇರುತ್ತದೆ.

**27. ಮಲೆನಾಡಿನಲ್ಲಿ ದೀಪದ ಬತ್ತಿಯ ಸಮಸ್ಯೆಯನ್ನು ಹೇಗೆ ಪರಿಹರಿಸಿಕೊಳ್ಳಲಾಯಿತು ?**

ಪಶ್ಚಿಮಘಟ್ಟದ ಕಾಡುಗಳಲ್ಲಿ ತೊಡಕಲು ಕುಡಿ ಎಂಬ ಬೂದು ಬಣ್ಣ ದಗಿಡದ ಎಳೆಯ ಕುಡಿಯನ್ನು ಸಂಗ್ರಹಿಸಿ, ಒಣಗಿಸಿ ಡಬ್ಬದಲ್ಲಿ ಶೇಖರಿಸಿ ನಂತರ ಎಣ್ಣೆಯಲ್ಲಿ ಅದ್ದಿದಾಗ ಹತ್ತಿಯಂತೆ ಹೀರಿಕೊಂಡು ದೀಪ ಉರಿಯಲು ಸಹಾಯಕವಾಗುತ್ತಿತ್ತು. ಇದನ್ನು ನಿತ್ಯ ಆರತಿಗೆ ಬಳಸುತ್ತಿದ್ದರು. ನಾಗ ಸಂಪಿಗೆಮರದ ಬೀಜಗಳನ್ನು ಕುಟ್ಟಿ ಚಿಕ್ಕ ಚಿಕ್ಕ ಉಂಡೆಗಳನ್ನಾಗಿ ಮಾಡಿ ದೀಪಾವಳಿ, ಕಾರ್ತೀಕ ಮಾಸದಲ್ಲಿ ಉರಿಸುತ್ತಿದ್ದರು. ಜವಾರಿ ಹತ್ತಿ ಗಿಡಗಳು ಬಿಡುತ್ತಿದ್ದ ಹತ್ತಿಯನ್ನು ದೀಪಕ್ಕೆ ಬಳಸುವ ಪರಿಪಾಠವಿತ್ತು. ಹೀಗೆ ಮಲೆನಾಡಿನಲ್ಲಿ ದೀಪದ ಬತ್ತಿಯ ಸಮಸ್ಯೆಯನ್ನು ಪರಿಹರಿಸಿಕೊಳ್ಳಲಾಯಿತು .

**V. ಕವಿಗಳ/ ಸಾಹಿತಿಗಳ ಜನ್ಮ ಸ್ಥಳ, ಕಾಲ, ಕೃತಿ ಮತ್ತು ಬಿರುದು/ ಪ್ರಶಸ್ತಿಗಳನ್ನು ಕುರಿತು ವಾಕ್ಯರೂಪದಲ್ಲಿ ಬರೆಯುವುದು. 2x3=6**

**28. ಸಾ.ರಾ. ಅಬೂಬಕ್ಕರ್**

ಸಾ.ರಾ. ಅಬೂಬಕ್ಕರ್ ರವರು 30 ಜೂನ್ 1936 ರಂದು ಕಾಸರಗೋಡಿನಲ್ಲಿ ಜನಿಸಿದರು.

**ಇವರ ಪ್ರಮುಖ ಕೃತಿಗಳು :** ಚಂದ್ರಗಿರಿಯತೀರದಲ್ಲಿ, ಸಹನಾ, ಕದನವಿರಾಮ, ಚಪ್ಪಲಿಗಳು, ಖೆಡ್ಡಾ, ಮುಂತಾದವು. ಕನ್ನಡ ಸಾಹಿತ್ಯ ಪರಿಷತ್ತಿನ ನೃಪತುಂಗ ಪ್ರಶಸ್ತಿ ಪಡೆದಿರುತ್ತಾರೆ.

**29. ಜಿ.ಎಸ್. ಶಿವರುದ್ರಪ್ಪ :**

ಇವರ ಪೂರ್ಣ ಹೆಸರು ಗುಗ್ಗರಿ ಶಾಂತವೀರಪ್ಪ ಶಿವರುದ್ರಪ್ಪನವರು ಸಾ.ಶ. 1926 ರಲ್ಲಿ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದಲ್ಲಿ ಜನಿಸಿದರು.

**ಇವರ ಪ್ರಮುಖ ಕೃತಿಗಳು :** ಕಾವ್ಯಾರ್ಥಚಿಂತನ, ಎದೆ ತುಂಬಿ ಹಾಡಿದೆನು,, ಸಾಮಗಾನ, ಚೆಲುವು–ಒಲವು, ಮಾಸ್ಕೋದಲ್ಲಿ ಇಪ್ಪತ್ತೆರಡು ದಿನಗಳು ಮುಂತಾದವು.

ಶ್ರೀಯುತರ 'ಕಾವ್ಯಾರ್ಥ ಚಿಂತನ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಹಂಪಿ ಕನ್ನಡ ವಿಶ್ವವಿದ್ಯಾನಿಲಯದ 'ನಾಡೋಜ' ಪ್ರಶಸ್ತಿ ಪಡೆದಿರುತ್ತಾರೆ. ರಾಷ್ಟ್ರಕವಿ ಅಭಿದಾನಕ್ಕೆ ಪಾತ್ರರಾಗಿರುತ್ತಾರೆ.

**VI. ಈ ಕೆಳಗಿನ ಪದ್ಯ ಭಾಗಕ್ಕೆ ಪ್ರಸ್ತಾರ ಹಾಕಿ, ಗಣವಿಭಾಗಿಸಿ ಛಂದಸ್ಸಿನ ಹೆಸರು ತಿಳಿಸಿ. 1x3=3**

30. ಅತಿ ಕುಟಿಲ ಮನಂಧನಲು

ಬ್ಧತೆಯಿಂದಂ ದುಷ್ಟ ಬುದ್ಧಿನುಡಿದಂ ಪುಸಿಯಂ

| | | | |
|---|---|---|---|
| 4 | 4 | 4 | |
| U UUU | UU_ | - UU | |
| ಅತಿಕುಟಿ | ಲಮನಂ | ಧನಲು | =12 |

| | | | | | |
|---|---|---|---|---|---|
| 4 | 4 | 4 | 4 | 4 | |
| U U ___ | _ _ | U _U | UU _ | UU _ | |
| ಬ್ಧತೆಯಿಂ | ದಂದು | ಷ್ಟಬುದ್ಧಿ | ನುಡಿದಂ | ಪುಸಿಯಂ | =20 |

ಮಾತ್ರಾಗಣ– ಕಂದಪದ್ಯ

**VII. ಅಲಂಕಾರವನ್ನು ಹೆಸರಿಸಿ, ಲಕ್ಷಣ ಬರೆದು ಸಮನ್ವಯಗೊಳಿಸಿ 1x3=3**

**31. "ಬಾನಿನಲ್ಲಿ ಗಾಳಿಪಟಗಳು ಹಕ್ಕಿಗಳಂತೆ ಹಾರಾಡುತ್ತಿದ್ದವು"**

ಅಲಂಕಾರದ ಹೆಸರು : ಉಪಮಾಲಂಕಾರ

ಲಕ್ಷಣ : : ಎರಡು ವಸ್ತುಗಳಿಗೆ ಪರಸ್ಪರವಾಗಿ ಇರುವ ಹೋಲಿಕೆಯನ್ನು ಹೇಳುವುದೇ ಉಪಮಾಲಂಕಾರ

ಸಮನ್ವಯ : ಉಪಮೇಯ : ಬಾನಿನಲ್ಲಿನ ಗಾಳಿಪಟಗಳು

ಉಪಮಾನ : ಹಕ್ಕಿಗಳು

ಉಪಮಾವಾಚಕ ಪದ : ಅಂತೆ

ಸಮಾನಧರ್ಮ : ಹಾರಾಟ

ಇಲ್ಲಿ ಉಪಮೇಯವಾದ 'ಬಾನಿನಲ್ಲಿನ' ಗಾಳಿಪಟ' ಗಳನ್ನು ಉಪಮಾನವಾದ ಹಕ್ಕಿಗಳಿಗೆ ಹೋಲಿಸಲಾಗಿದೆ. ಅಂತೆ ಎಂಬ ಉಪಮಾವಾಚಕಪದವಿದ್ದು ಹಾರಾಟ ಎಂಬ ಸಮಾನ ಧರ್ಮಇರುವುದರಿಂದ ಇದು ಪೂರ್ಣೋಪಮಾಲಂಕಾರವಾಗಿದೆ.

**VIII. ಕೆಳಗೆ ಕೊಟ್ಟಿರುವಗಾದೆ ಮಾತುಗಳಲ್ಲಿ ಯಾವುದಾದರು ಒಂದನ್ನು ಆರಿಸಿಕೊಂಡು ವಿಸ್ತರಿಸಿ ಬರೆಯಿರಿ. (ವಿಷಯಶಿಕ್ಷಕರ ಸಹಾಯದಿಂದ ಅಭ್ಯಾಸ ಮಾಡುವುದು)** 1x3=3

32. ಕಟ್ಟುವುದು ಕಠಿಣಕೆಡಹುವುದು ಸುಲಭ

ಅಥವಾ

ಮಾಡಿದ್ದುಣ್ಣೋಮಾರಾಯ

**IX. ಕೆಳಗಿನ ವಾಕ್ಯ ಅಥವಾ ಹೇಳಿಕೆಗಳಿಗೆ ಸಂದರ್ಭ ಮತ್ತು ಸ್ವಾರಸ್ಯಗಳನ್ನು ಬರೆಯಿರಿ. 6x3=18**

**33. "ರಾಮನೇಧೈರ್ಯಗೆಡೆ ಸ್ಥೈರ್ಯ ಕೆಡೆ ಯಾರು"**

**ಆಯ್ಕೆ :** ಪ್ರಸ್ತುತವಾಕ್ಯವನ್ನು 'ಪು.ತಿ. ನರಸಿಂಹಾಚಾರ್' ಅವರುರಚಿಸಿರುವ 'ಶಬರಿ' ಗೀತನಾಟಕದಿಂದ ಆಯ್ದ 'ಶಬರಿ' ಎಂಬ ಗದ್ಯಪಾಠದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ :** ಸಿತಾಪಹರಣದ ನಂತರ ರಾಮಲಕ್ಷಣರು ಸೀತೆಯನ್ನು ಎಲ್ಲಾ ಕಡೆ ಹುಡುಕಿದರೂ ಸೀತೆಯ ಸುಳಿವು ಸಿಗದೇ ಇದ್ದಾಗ, ಅಸಹಾಯಕನಾದ ಶ್ರೀರಾಮನುಗಿರಿವನವನ್ನು ಕುರಿತು ಸೀತೆನನಗೆ ದೊರೆವಳೇ, ದೊರೆಯಳೇ ಎಂದು ಪ್ರಾರ್ಥಿಸಿಕೊಳ್ಳುತ್ತಿರುವುದನ್ನು ಗಮನಿಸಿದ ಲಕ್ಷ್ಮಣನು "ತಾಳಿಕೋ ಅಣ್ಣಾತಾಳಿಕೋ, ಸೂರ್ಯನೇಕಾಂತಿಯನ್ನು ಕಳೆದುಕೊಂಡರೆ ಆ ಕಾಂತಿಯನ್ನು ನೀಡುವವರು ಯಾರು?" ಎಂದು ಹೇಳುತ್ತಾ ಅಣ್ಣನನ್ನು ಸಂತೈಸುವ ಸಂದರ್ಭದಲ್ಲಿ ಮೇಲ್ಕಂಡ ಮಾತು ಬಂದಿದೆ.

**ಸ್ವಾರಸ್ಯ :** ಲೋಕೋದ್ಧಾರಕನಾದ ಶ್ರೀರಾಮನೇಧೈರ್ಯವನ್ನು ಕಳೆದುಕೊಂಡರೆ ಜನಸಾಮಾನ್ಯರ ಸ್ಥಿತಿ ಏನು ಎಂದು ಭಾವಿಸಿ ಲಕ್ಷ್ಮಣ ಆತಂಕಗೊಂಡಿರುವುದು ಇಲ್ಲಿ ಸ್ವಾರಸ್ಯಪೂರ್ಣವಾಗಿ ವ್ಯಕ್ತವಾಗಿದೆ.

**34. "ನಿಮ್ಮ ದೇಶದ ಗೌರವವನ್ನು ಕಾಯಿರಿ! ಇದು ದೊಡ್ಡದಾದ ರಾಷ್ಟ್ರ"**

**ಆಯ್ಕೆ :** ಪ್ರಸ್ತುತವಾಕ್ಯವನ್ನು 'ವಿ.ಕೃ.ಗೋಕಾಕ್' ಅವರು ರಚಿಸಿರುವ 'ಸಮುದ್ರದಾಚೆಯಿಂದ' ಎಂಬ ಪ್ರವಾಸ ಕಥನದಿಂದ ಆಯ್ದ ಲಂಡನ್ನಗರ ಎಂಬ ಗದ್ಯಪಾಠದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ :** ಲೇಖಕರು ಲಂಡನ್ ನಗರಕ್ಕೆ ಪ್ರವಾಸಕೈಗೊಂಡಿದ್ದಾಗ ಲಂಡನ್ ನಗರದ ಸೌಂದರ್ಯ, ಅಲ್ಲಿಯ ಜೀವನ ಕ್ರಮ, ಮಹಾಪುರುಷರ ಸ್ಮಾರಕಗಳು ಹಾಗೂ ತಮ್ಮ ದೇಶಕ್ಕಾಗಿ ಜೀವನವನ್ನು ಲೆಕ್ಕಿಸದೆ ದುಡಿದ ಇತಿಹಾಸ ಪ್ರಸಿದ್ಧ ಮಹಾಪುರುಷರ ಜೀವನದಲ್ಲಿನ ಮಹತ್ವದ ಸನ್ನಿವೇಸಗಳನ್ನು ಪರಿಚಯಿಸುವ ಸಂದರ್ಭದಲ್ಲಿ ಮೇಲ್ಕಂಡ ಮಾತನ್ನು ಹೇಳಿದ್ದಾರೆ.

**ಸ್ವಾರಸ್ಯ :** ಇಂಗ್ಲೆಂಡಿನಲ್ಲಿ ವಿವಿಧ ಕ್ಷೇತ್ರಗಳಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸಿದ ಸಾಧಕರನ್ನು ಸ್ಮಾರಕವಾಗಿ ಸ್ಮರಣೀಯವಾಗಿ ಬಳಸಿಕೊಳ್ಳುವುದರ ಮೂಲಕ ಅವರಲ್ಲಿರುವ ರಾಷ್ಟ್ರಪ್ರೇಮ, ಐತಿಹಾಸಿಕ ಪ್ರಜ್ಞೆ ಇತ್ಯಾದಿ ಅಂಶಗಳು ಇಲ್ಲಿ ಸ್ವಾರಸ್ಯಪೂರ್ಣವಾಗಿ ವ್ಯಕ್ತವಾಗಿದೆ.

**35. "ಪೊನ್ನನೆಲ್ಲಮಂ ನೀನೆ ಕೊಂಡೆ"**

**ಆಯ್ಕೆ :** ಪ್ರಸ್ತುತ ಈ ವಾಕ್ಯವನ್ನು ದುರ್ಗಸಿಂಹ ಕವಿರಚಿಸಿರುವ ಕರ್ಣಾಟಕ ಪಂಚತಂತ್ರಂ ಕೃತಿಯಿಂದ ಆರಿಸಿರುವ ವೃಕ್ಷಸಾಕ್ಷಿ ಎಂಬ ಗದ್ಯಪಾಠದಿಂದ ಆರಿಸಿಕೊಳ್ಳಲಾಗಿದೆ

**ಸಂದರ್ಭ ;** ಧರ್ಮ ಬುದ್ಧಿ ಮತ್ತು ದುಷ್ಟಬುದ್ಧಿ ಇಬ್ಬರೂ ಕೂಡಿ ಸಂಪಾದಿಸಿದ ಹೊನ್ನಿನಲ್ಲಿ ಖರ್ಚಿಗೆ ಬೇಕಾದಷ್ಟುತೆಗೆದುಕೊಂಡು ಉಳಿದೆಲ್ಲವನ್ನು ಗುಂಡಿಯೊಳಕ್ಕೆ ಬಚ್ಚಿಟ್ಟಿದ್ದರು. ನಂತರ ದುಷ್ಟ ಬುದ್ಧಿ ಧರ್ಮ ಬುದ್ಧಿಗೆ ಗೊತ್ತಾಗದ ಹಾಗೆ ಅದೆಲ್ಲವನ್ನು ತೆಗೆದುಕೊಂಡು, ನಂತರ ಧರ್ಮಬುದ್ಧಿಯಲ್ಲಿಗೆ ಬಂದು ಖರ್ಚಿಗೆ ಹಣವಿಲ್ಲ ಎಂದು ಧರ್ಮಬುದ್ಧಿಯನ್ನು ಹಣವಿಟ್ಟಿದ್ದ ಸ್ಥಳಕ್ಕೆ ಕರೆದುಕೊಂಡು ಹೋಗಿ ನೋಡಿದಾಗ ಹಣವಿಲ್ಲದಿರುವುದನ್ನು ಕಂಡು ಧರ್ಮಬುದ್ಧಿಯ ಮೇಲೆ ಕಳ್ಳತನದ ಆರೋಪ ಹೊರಿಸುವ ಸಂದರ್ಭದಲ್ಲಿ ಈ ಮಾತು ಬಂದಿರುತ್ತದೆ.

**ಸ್ವಾರಸ್ಯ :** ದುಷ್ಟಬುದ್ಧಿಯವಂಚನೆ, ಕಪಟತನ, ವಿಶ್ವಾಸ ಘಾತುಕತನ, ಮಿತ್ರದ್ರೋಹಿತನ ಇತ್ಯಾದಿ ಅಂಶಗಳು ಇಲ್ಲಿ ಸ್ವಾರಸ್ಯಪೂರ್ಣವಾಗಿ ವ್ಯಕ್ತವಾಗಿದೆ.

**36. "ಮಂಗಳಲೋಕದ ಅಂಗಳಕೇರಿ"**

**ಆಯ್ಕೆ :** ಪ್ರಸ್ತುತ ಈ ವಾಕ್ಯವನ್ನು 'ದ.ರಾ. ಬೇಂದ್ರೆಯವರು' ರಚಿಸಿರುವ 'ಗರಿ' ಕವನ ಸಂಕಲನದಿಂದ ಆರಿಸಿರುವ' ಹಕ್ಕಿಹಾರುತಿದೆ ನೋಡಿದಿರಾ' ಎಂಬ ಪದ್ಯಪಾಠದಿಂದ ಆರಿಸಿಕೊಳ್ಳಲಾಗಿದೆ

**ಸಂದರ್ಭ;** ಕವಿ ಬೇಂದ್ರೆ ಅವರು ಕಾಲದಗತಿಯನ್ನು ಹಾರುವ ಹಕ್ಕಿಯೊಂದಿಗೆ ಸಮೀಕರಿಸಿ ಕಾಲಪಕ್ಷಿಯೊಂದಿಗೆ ಸಮೀಕರಿಸಿ ಕಾಲಪಕ್ಷಿಯು ಶುಕ್ರಗ್ರಹವೆಂಬ ಹಳ್ಳಿಯ ಮೇರೆಯನ್ನು ಮೀರಿ, ಚಂದ್ರಲೋಕದ ನೀರನ್ನುಹೀರಿ, ಆಡುತ್ತಾ, ಹಾರುತ್ತಾ, ಮಂಗಳ ಲೋಕದ ಅಂಗಳಕ್ಕೆ ಏರಿದೆ ಎಂದು ವರ್ಣನೆ ಮಾಡುವ ಸಂದರ್ಭದಲ್ಲಿ ಮೇಲ್ಕಂಡ ಮಾತನ್ನು ಹೇಳಿದ್ದಾರೆ.

**ಸ್ವಾರಸ್ಯ :** ಶುಕ್ರ, ಚಂದ್ರ, ಮಂಗಳ ಲೋಕದ ಸಂಚಾರ ಕಾಲದ ಭೌತಿಕ ಲಕ್ಷಣಗಳು ಹಾಗೂ ಮಾನವ ಪ್ರಪಂಚದಲ್ಲಾಗುವ ದಾರ್ಶನಿಕ, ವೈಜ್ಞಾನಿಕ ಮುನ್ನೋಟಗಳು ಇಲ್ಲಿ ಸ್ವಾರಸ್ಯಪೂರ್ಣವಾಗಿ ವ್ಯಕ್ತವಾಗಿದೆ

37. 'ಬೆನ್ನ ಬೆನ್ಹತ್ತಿತಿರಿತಿರ್ವಿ ಕಡಿದರೊ ಏನು ಉಳಿಯದ್ಹಂಗ"

**ಆಯ್ಕೆ :** ಪ್ರಸ್ತುತ ಈ ವಾಕ್ಯವನ್ನು ಡಾ.ಬಿ.ಎಸ್.ಗದ್ದಗಿಮಠರವರು ಸಂಪಾದಿಸಿರುವ ಕನ್ನಡ ಜನ ಪದಗೀತೆಗಳು ಕೃತಿಯಿಂದ ಆರಿಸಿರುವ 'ಹಲಗಲಿಬೇಡರು'ಎಂಬ ಪದ್ಯಪಾಠದಿಂದ ಆರಿಸಿಕೊಳ್ಳಲಾಗಿದೆ.

**ಸಂದರ್ಭ :** ಬ್ರಿಟೀಷರು 1857 ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ನಂತರ ಭಾರತೀಯರ ಬಳಿ ಇರುವ ಆಯುಧಗಳನ್ನು ವಶಪಡಿಸಿಕೊಳ್ಳುವ ಸಲುವಾಗಿ ನಿಶ್ಶಸ್ತ್ರೀಕರಣ ಕಾಯಿದೆಯನ್ನು ಜಾರಿಗೆ ತಂದರು. ಇದನ್ನು ವಿರೋಧಿಸಿ ಹಲಗಲಿ ಬೇಡರು ದಂಗೆ ಎದ್ದರು. ದಂಗೆಯನ್ನು ನಿಯಂತ್ರಿಸುವ ಸಂದರ್ಭದಲ್ಲಿ, ಪ್ರತಿಯಾಗಿ ಬ್ರಿಟೀಷರ ದಂಡು ಹಲಗಲಿಯನ್ನು ಮುತ್ತಿದಂಗೆ ಎದ್ದವರನ್ನು ಬಗ್ಗು ಬಡಿದರು ಎಂದು ಹೇಳುವ ಮೂಲಕ ದಾಳಿಯ ತಿವ್ರತೆಯನ್ನು ವಿವರಿಸುವ ಸಂದರ್ಭದಲ್ಲಿ ಈ ಮಾತನ್ನು ಲಾವಣಿಕಾರ ಹೇಳಿರುತ್ತಾರೆ.

**ಸ್ವಾರಸ್ಯ :** ಬ್ರಿಟೀಷರು ಹೊಸ ಹೊಸ ಕಾಯಿದೆಗಳನ್ನು ಜಾರಿಗೆ ತರುವುದರ ಮೂಲಕ ಭಾರತೀಯರ ಮೇಲೆ ನಿರಂತರವಾಗಿದ ಬ್ಯಾಳಿಕೆಯನ್ನು, ದೌರ್ಜನ್ಯಗಳನ್ನು ಎಸಗುತ್ತಿದ್ದರು ಎಂಬುದನ್ನು ಇಲ್ಲಿ ಅರ್ಥಪೂರ್ಣವಾಗಿ ವ್ಯಕ್ತಪಡಿಸಲಾಗಿದೆ.

**38. ತನ್ನ ಮಾತೆಯಂ ಸರ್ವಜನ "ಮುಂಬಂಜೆಯೆನ್ನದಿರ್ದಪುದೆ"**

2019 ರ ಪ್ರಶ್ನೆ ಪತ್ರಿಕೆಯಲ್ಲಿ ಈ ಪ್ರಶ್ನೆಗೆ ಉತ್ತರ ನೀಡಲಾಗಿದೆ.

**X. ಕೆಳಗಿನ ಪದ್ಯ ಭಾಗವನ್ನು ಪೂರ್ಣಗೊಳಿಸಿ ಬರೆಯಿರಿ. 1x4=4**

39. ಹಸುಗಾಗಸ : ಹೊಸಹೂವಿನ ____________

______________________________

______________________________

ಅಥವಾ

______________________________

______________________________

ಬಿಸಿಲೂ! ಯುಸಿರೂ

**ಉತ್ತರ :**

ಹಸುರಾಗಸ; ಹಸುರುಮುಗಿಲು ;

ಹಸುರುಗದ್ದೆಯಬಯಲು ;

ಹಸುರಿನಮಲೆ ; ಹಸುರುಕಣಿವೆ ;

ಹಸುರುಸಂಜೆಯೀಬಿಸಿಲೂ !

**ಅಥವಾ**

ಹೊಸ ಹೂವಿನ ಕಂಪು ಹಸುರು,

ಎಲರಿನತಂಪೂ ಹಸುರು!

ಹಕ್ಕಿಯ ಕೊರಲಿಂಪು ಹಸುರು

ಹಸುರು ಹಸುರಿಳೆಯುಸಿರೂ!

**XI. ಪದ್ಯ ಭಾಗವನ್ನು ಓದಿ, ಅರ್ಥ ಮಾಡಿಕೊಂಡು, ಅಡಕವಾಗಿರುವ ಮೌಲ್ಯವನ್ನಾಧರಿಸಿ ಸಾರಾಂಶ ಬರೆಯಿರಿ. 1x4=4**

40. ಮರಳು ಮಾಧವಮಹಿಯ ರಾಜ್ಯದ

ಸಿರಿಗೆ ಸೋಲುವನಲ್ಲಕೌಂತೇ

ಯರುಸುಯೋಧನರೆನಗೆಬೆಸಕೈವಲ್ಲಿಮನವಿಲ್ಲ

ಹೊರೆದದಾತಾರಂಗೆಹಗೆವರ

ಶಿರವನರಿದೊಪ್ಪಿಸುವೆನೆಂಬೀ

ಭರದೊಳಿರ್ದೆನುಕೌರವೇಂದ್ರನಕೊಂದೆನೀನೆಂದ

**ಉತ್ತರ :** ಪ್ರಸ್ತುತ ಪದ್ಯಭಾಗವನ್ನು ಕುಮಾರವ್ಯಾಸ ಕವಿರಚಿಸರುವ 'ಕೌರವೇಂದ್ರನ ಕೊಂದೆ ನೀನು' ಎಂಬ ಪದ್ಯಪಾಠದಿಂದ ಆರಿಸಿಕೊಳ್ಳಲಾಗಿದೆ. ಕೃಷ್ಣ ಸಂಧಾನವು ತಿರಸ್ಕೃತಗೊಂಡು ಯುದ್ಧ ಅನಿವಾರ್ಯವಾದಾಗ ಧರ್ಮಪಕ್ಷಪಾತಿಯಾದ ಶ್ರೀಕೃಷ್ಣನು ಭೇದತಂತ್ರವನ್ನು ಬಳಸಿ ಕರ್ಣನಿಗೆ ಆತನ ಜನ್ಮರಹಸ್ಯವನ್ನು ತಿಳಿಸಿಮನದಲ್ಲಿ ನೋವು, ಸಂಕಟ ಉಂಟಾಗುವಂತೆ ಮಾಡಿ ಅನಂತರ ನಿನಗೆ ಹಸ್ತಿನ ಪುರದ ರಾಜ್ಯದ ಘನತೆಯನ್ನು ಮಾಡುವೆನು ಎಂಬ ಆಮಿಷವನ್ನು ಒಡ್ಡಿದನು. ಆಗ ಕರ್ಣನು ಕೃಷ್ಣನನ್ನು ಕುರಿತು "ಮರಳು ಮಾಧವನಾನು ಈ ರಾಜ್ಯದ

ಸಿರಿಗೆ ಸೋಲುವವನಲ್ಲ ಪಾಂಡವರು, ದುರ್ಯೋಧನನಿಂದ ಸೇವೆ ಮಾಡಿಸಿಕೊಳ್ಳಲು ಮನಸ್ಸಿಲ್ಲ. ನನ್ನನ್ನು ಕಾಪಾಡಿದ ನನ್ನ ಒಡೆಯನಾದ ದುರ್ಯೋಧನನಿಗೆ ಶತ್ರುಗಳತಲೆಯನ್ನು ಕಡಿದುಒಪ್ಪಿಸಬೇಕೆಂಬ ಆತುರದಲ್ಲಿ ಇದ್ದೆನು. ಆದರೆ ನೀನು ನನ್ನ ಜನ್ಮ ರಹಸ್ಯವನ್ನು ಹೇಳಿ ಕೌರವೇಂದ್ರನ ಕೊಂದೆ ಎಂದು ಹೇಳಿದನು. ಕರ್ಣನ ವ್ಯಕ್ತಿತ್ವದ ಹಿರಿಮೆ, ಸ್ವಾಮಿನಿಷ್ಠೆ ಇಲ್ಲಿ ಕಂಡು ಬರುವ ಉತ್ತಮ ಮೌಲ್ಯಗಳಾಗಿವೆ.

**XII. ಈ ಕೆಳಗಿನ ಪ್ರಶ್ನೆಗಳಲ್ಲಿ ಯಾವುದಾದರೂ ಎರಡು ಪ್ರಶ್ನೆಗಳಿಗೆ ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ 2x4=8**

**41. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕಾರ್ಯನಿರ್ವಹಿಸುತ್ತಿದ್ದ 'ಪ್ರಜಾಪ್ರತಿ ನಿಧಿ ಸಭೆ' ಹಾಗೂ ನ್ಯಾಯವಿಧಾಯಕ ಸಭೆ' ಯನ್ನು ಕುರಿತು ಬರೆಯಿರಿ.**

ಅಥವಾ

**ಶಿಕ್ಷಣ ಕ್ಷೇತ್ರಕ್ಕೆ ವಿಶ್ವೇಶ್ವರಯ್ಯ ಅವರು ಸಲ್ಲಿಸಿದ ಕೊಡುಗೆಯನ್ನು ತಿಳಿಸಿ.**

2020 ರ ಪ್ರಶ್ನೆಪತ್ರಿಕೆಯಲ್ಲಿ ಈ ಪ್ರಶ್ನೆಗೆಉತ್ತರನೀಡಲಾಗಿದೆ.

**42. ಪರಶುರಾಮನು ಸಹಾಯ ಅರಸಿ ಬಂದದ್ರೋಣರನ್ನು ಸತ್ಕರಿಸಿ ಬೀಳ್ಕೊಟ್ಟ ಬಗೆಯನ್ನು ವಿವರಿಸಿ**

ಅಥವಾ

**ದ್ರೋಣರುದ್ರು ಪದನ ವಿರುದ್ಧ ಶಪಥ ಮಾಡಲು ಕಾರಣವಾದ ಅಂಶಗಳನ್ನು ವಿವರಿಸಿ.**

2019 ರ ಪ್ರಶ್ನೆ ಪತ್ರಿಕೆಯಲ್ಲಿ ಈ ಪ್ರಶ್ನೆಗೆ ಉತ್ತರ ನೀಡಲಾಗಿದೆ.

**XIII. ಗದ್ಯ ಭಾಗವನ್ನು ಓದಿಕೊಂಡು, ಪ್ರಶ್ನೆಗಳಿಗೆ ಉತ್ತರಿಸುವುದು: (ಅಂಶಗಳನ್ನಾಧರಿಸಿ ಪ್ರತಿ ಸರಿಯುತ್ತರಕ್ಕೆ 2 ಅಂಕಗಳು) 2x2=4**

**43. ಕೆಲವು ದಿನಗಳ ತರುವಾಯ ರಂಗಣ್ಣ ಸ್ಕೂಲುಗಳ ಭೇಟಿಗೆಂದು ಹೊರಟ. ತಿಪ್ಪೇನಹಳ್ಳಿಯ ಮೇಷ್ಟ್ರು ನಿಜವಾಗಿಯೂ ರೂಲ್ಸಿಗೆ ವಿರುದ್ಧವಾಗಿ ನಡೆಯುತ್ತಿದ್ದಾರೆಯೇ? ಇನ್ನೂ ಇತರರು ಯಾರು ಹಾಗೆ ದಾಖಲೆಯಿಲ್ಲದ ಮಕ್ಕಳನ್ನು ಸೇರಿಸಿಕೊಂಡಿದ್ದಾರೆ? ನೋಡೋಣ ಎಂದು ಆಲೋಚಿಸುತ್ತ ತಿಪ್ಪೇನಹಳ್ಳಿಗೆಸುಮಾರು ಒಂಭತ್ತು ಗಂಟೆ ಹೊತ್ತಿಗೆ ಹೋದ. ರಂಗಣ್ಣಬೈಸ್ಕಲ್ಲಿಂದ ಇಳಿದು, ಅದನ್ನು ಗೋಡೆಗೆ ಒರಗಿಸಿದನು. ಮೇಷ್ಟ್ರು ವೆಂಕಣ್ಣಭಯ ದಿಂದ ನಡುಗುತ್ತ ಹೊರಕ್ಕೆ ಬಂದು ನಮಸ್ಕಾರ ಮಾಡಿದನು. ಪಾಠ ಶಾಲೆಯಗೋಡೆಗೆ ನೋಟೀಸ್ ಬೋರ್ಡ್ ಒಂದನ್ನು ತಗಲು ಹಾಕಿತ್ತು. ನೋಟೀಸು ಬೋರ್ಡಿನ ಮೇಲೆ (1) ಮಕ್ಕಳು ಸರಿಯಾದ ಹೊತ್ತಿಗೆ ಬರಬೇಕು(2) ಪಾಠ ಕಾಲದಲಿ ಗ್ರಾಮಸ್ಥರು ಒಳಕ್ಕೆ ಬರಕೂಡದು. (3) ದಾಖಲೆಯಿಲ್ಲದ ಮಕ್ಕಳನ್ನು ಒಳಕ್ಕೆ ಸೇರಿಸುವುದಿಲ್ಲ. (4) ಸ್ಕೂಲಿನ ಒಪ್ಪಾರದಲ್ಲಿ ಗ್ರಾಮಸ್ಥರು ಯಾರೂ ಕುಳಿತು ಗಲಾಟೆ ಮಾಡಕೂಡದು – ಎಂದು ದಪ್ಪಕ್ಷರಗಳಲ್ಲಿ ಬರೆದಿತ್ತು. ರಂಗಣ್ಣ ಅವುಗಳನ್ನೆಲ್ಲ ನೋಡಿ ತೃಪ್ತಿಪಟ್ಟುಕೊಂಡನು. "ಮೇಷ್ಟೇ! ಹಿಂದೆ ಸಾಹೇಬರು ಬಂದಾಗ ಈ ನೋಟೀಸ್ ಬೋರ್ಡ್‌ನ್ನು ಹಾಕಿರಲಿಲ್ಲವೇ?" ಎಂದುಕೇಳಿದನು.**

"ಹಾಕಿದ್ದೆ ಸ್ವಾಮಿ! ಎಲ್ಲವನ್ನೂ ಹಾಕಿದ್ದೆ! ಏನು ಹಾಕಿದ್ದರೆ ಏನು? ನನ್ನ ಗ್ರಹಚಾರ! ತಮ್ಮ ಜುಲ್ಮಾನೆ ಆರ್ಡರು ನಿನ್ನೆ ನನ್ನ ಕೈಗೆ ತಲುಪಿತು ಸ್ವಾಮಿ! ಅದನ್ನು ನೋಡಿ ಎದೆಯೊಡೆದು ಹೋಯಿತು ಅನ್ನ ನೀರು ಮಟ್ಟಿದ್ದರೆ ಕೇಳಿ! ಆ ಸೂರ್ಯನಾರಾಯಣನ ಆಣೆ!" ಎಂದನು.

**ಪ್ರಶ್ನೆಗಳು :**

**ಅ) ತಿಪ್ಪೇನಹಳ್ಳಿ ನೋಟೀಸ್ ಬೋರ್ಡಿನ ಮೇಲೆ ಏನೆಂದು ಬರೆಯಲಾಗಿತ್ತು?**

ತಿಪ್ಪೇನಹಳ್ಳಿ ನೋಟೀಸು ಬೋರ್ಡಿನ ಮೇಲೆ (1) ಮಕ್ಕಳು ಸರಿಯಾದ ಹೊತ್ತಿಗೆ ಬರಬೇಕು (2) ಪಾಠ ಕಾಲದಲಿ ಗ್ರಾಮಸ್ಥರು ಒಳಕ್ಕೆ ಬರಕೂಡದು. (3) ದಾಖಲೆಯಿಲ್ಲದ ಮಕ್ಕಳನ್ನು ಒಳಕ್ಕೆ ಸೇರಿಸುವುದಿಲ್ಲ. (4) ಸ್ಕೂಲಿನ ಒಪ್ಪಾರದಲ್ಲಿ ಗ್ರಾಮಸ್ಥರು ಯಾರೂ ಕುಳಿತು ಗಲಾಟೆ ಮಾಡಕೂಡದು ಎಂದು ಬರೆಯಲಾಗಿತ್ತು

**ಆ) ರಂಗಣ್ಣ ತಿಪ್ಪೇನಹಳ್ಳಿ ಶಾಲೆಗೆ ಭೇಟಿ ನೀಡಲು ಕಾರಣವೇನು?**

ತಿಪ್ಪೇನಹಳ್ಳಿಯ ಮೇಷ್ಟ್ರುನಿಜವಾಗಿಯೂ ರೂಲ್ಸಿಗೆ ವಿರುದ್ಧವಾಗಿ ನಡೆಯುತ್ತಿದ್ದಾರೆಯೇ? ಇನ್ನೂ ಇತರರು ಯಾರು ಹಾಗೆ ದಾಖಲೆಯಿಲ್ಲದ ಮಕ್ಕಳನ್ನು ಸೇರಿಸಿಕೊಂಡಿದ್ದಾರೆ? ನೋಡೋಣ ಎಂದು ಆಲೋಚಿಸುತ್ತ ರಂಗಣ್ಣ ತಿಪ್ಪೇನಹಳ್ಳಿ ಶಾಲೆಗೆ ಭೇಟಿ ನೀಡಿದನು.

**XIV. ಕೆಳಗಿನ ಯಾವುದಾದರೂ ಒಂದಕ್ಕೆ ಕೊಟ್ಟಿರುವ ಮಾಹಿತಿಯನ್ನು ಆಧರಿಸಿ ಪತ್ರ ಬರೆಯಿರಿ 1x5=5**

44. ನಿಮ್ಮನ್ನು ಹಾಸನದ ವಿಜಯನಗರದ ನಿವಾಸಿ 'ವಸಂತ್ ಕುಮಾರ್' ಎಂದು ಭಾವಿಸಿಕೊಂಡು, ನಿಮ್ಮ ಪ್ರದೇಶದಲ್ಲಿ ಉಂಟಾದ ಪ್ರವಾಹದ ಪರಿಸ್ಥಿತಿಯನ್ನು ವಿವರಿಸಿ, ಪರಿಹಾರಕಾರ್ಯ ಕೈಗೊಳ್ಳುವಂತೆ ಕೋರಿ ಜಿಲ್ಲಾಧಿಕಾರಿಗೊಂದು ಪತ್ರ ಬರೆಯಿರಿ.

**ಅಥವಾ**

ನಿಮ್ಮನ್ನು ಬೆಂಗಳೂರಿನ ಸರ್ಕಾರಿ ಪ್ರೌಢಶಾಲೆಯ 'ರಕ್ಷಿತ' ಎಂದು ಭಾವಿಸಿಕೊಂಡು, ಶಾಲೆಯಲ್ಲಿ ಆಚರಿಸಿದ '75 ನೇ ಸ್ವಾತಂತ್ರ್ಯದ ಅಮೃತ ಮಹೋತ್ಸವ' ಕಾರ್ಯವನ್ನು ಕುರಿತು ಮೈಸೂರಿನ ಸರ್ಕಾರಿ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ 'ಹರ್ಷಿತ' ಎಂಬ ಹೆಸರಿನ ಗೆಳತಿಗೆ ಪತ್ರವನ್ನು ಬರೆಯಿರಿ.

(ಪತ್ರ ಲೇಖನವನ್ನು ವಿಷಯ ಶಿಕ್ಷಕರ ಸಹಾಯದಿಂದ ಅಭ್ಯಾಸ ಮಾಡುವುದು)

**XV. ಕೆಳಗಿನ ಯಾವುದಾದರೂ ಒಂದು ವಿಷಯದ ಬಗ್ಗೆ ಹದಿನೈದು ವಾಕ್ಯಗಳಿಗೆ ಮೀರದಂತೆ ಪ್ರಬಂಧ ಬರೆಯಿರಿ 1x5=5**

**45. ರಾಷ್ಟ್ರೀಯ ಭಾವೈಕ್ಯ**

ಅಥವಾ

ಸಾಮಾಜಿಕ ಜಾಲ ತಾಣಗಳ ಸದ್ಬಳಕೆ

(ವಿಷಯ ಶಿಕ್ಷಕರ ಸಹಾಯದಿಂದ ಪ್ರಬಂಧ ಬರವಣಿಗೆ ಅಭ್ಯಾಸ ಮಾಡುವುದು)